

ಕರ್ನಾಟಕ ಸರ್ಕಾರ

# ಅಪ್ಪ ಹೇಳ್ದ ಹತ್ತ್ ಕತೆಗ

(ಜನಪದ)



ಭವಾನಿಶಂಕರ್ ಅಡ್ತಲೆ











ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

# ಅಪ್ಪ ಹೇಳ್ದ ಹತ್ತ್ ಕತೆಗ

(ಜನಪದ)

ಭವಾನಿಶಂಕರ್ ಅಡ್ತಲೆ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.
ಮಡಿಕೇರಿ, ಕೊಡಗು ಜಿಲ್ಲೆ - 571 201

**'APPA HELDA HATH KATHEGA'** Arebhashe Kathajompe in Arebhase language written by **Bhavani Shankar Adthale** Published by 'Karnataka Arebhase Samskrithi Mathu Sahitya Academy.

ಪ್ರಕಟಣೆ : **2019**

ಪ್ರತಿಗಳು : **500**

ಬೆಲೆ : ರೂ. 60/- Price : Rs. 60/-

ಪುಟಗಳು : 56



ಸಲಹಾ ಸಮಿತಿ :

ಶ್ರೀ ಎ.ಕೆ. ಹಿಮಕರ
ಶ್ರೀ ಪರಶುರಾಮ ಚಿಲ್ತಡ್ಕ
ಶ್ರೀಮತಿ ತಿರುಮಲೇಶ್ವರಿ
ಶ್ರೀಮತಿ ಶ್ವೇತಾ ಮಡಪ್ಪಾಡಿ

ಪ್ರಕಾಶಕರು : ರಿಜಿಸ್ಟ್ರಾರ್
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.

**ಪುಸ್ತಕ ದೊರೆಯುವ ಸ್ಥಳ :**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,
ಕಾಫಿ ಕೃಪ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ, ಮಡಿಕೇರಿ.
ದೂ. : 08272-223055

ಮುದ್ರಣ :
ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,
ಮಡಿಕೇರಿ, ಕೊಡಗು
Ph : 08272-224919, 9448135592

# ಅಧ್ಯಕ್ಷರ ಮಾತ್

2019ರ ಮಾರ್ಚ್ 2ನೇ ತಾರೀಕ್‌ನಂದ್ ಅರೆಬಾಸೆಲಿನ ಸೂರೂನ ಸಾಹಿತ್ಯ ಸಮ್ಮೇಳನ ನಡ್ಡದೆ. ಸಾಹಿತ್ಯ ಸಮ್ಮೇಳನಂತೇಳಿರೆ ಸಾಹಿತ್ಯ ಪುಸ್ತಕಗಳ ಹಬ್ಬ. ನಮ್ಮ ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಸದಸ್ಯರಾದ ಎ.ಕೆ. ಹಿಮಕರ ಅವರ ಸಂಚಾಲಕತ್ವಲಿ ಈಗಾಗ್ಲೆ ಮೂರು ಪುಸ್ತಕ ಪ್ರಕಟಣೆ ಮಾಡಿಟು. ಇದೀಗ ಸಮ್ಮೇಳನದ ದಿನದಂದ್ ಒಮ್ಮೆಲೇ ಏಳ್ ಪುಸ್ತಕನ ಪ್ರಕಟಣೆ ಮಾಡಿಕೆ ಎಲ್ಲಾ ಪೂರ್ವ ತಯಾರಿ ನಡೆಸ್ತಾ ಒಳೊ. ಪುಸ್ತಕ ಅರೆಬಾಸೆನ ಜ್ಞಾನ ಭಂಡಾರ. ಪುಸ್ತಕನ ಎಲ್ಲೊವೂ ತಕಂಡ್‌ಹೋಗಿ ಮನೆಗಳ್ಲಿ ಇಸಿಕಂಡ್ ಓದೊಕು. ನಮ್ಮ ಬಾಸೆ ಒಳ್ಯೊಕಾದರೆ ಸಾಹಿತ್ಯ ರಚನೆ ಮಾಡ್ದು, ಅದರ ಅಧ್ಯಯನ, ಸಂಶೋಧನೆ ಮಾಡ್ದೇ ಮುಖ್ಯ. ಬಾಸೆ ನಾಶ ಆದರೆ, ಸಂಸ್ಕೃತಿ ನಾಶ ಆದೆ. ಸಂಸ್ಕೃತಿ ನಾಶ ಆದರೆ ನಮ್ಮ ಜೀವ ಶಕ್ತಿನೇ ಇಲ್ಲದಾದೆ. ಮನುಷ್ಯರ್ ಸಂಸ್ಕೃತಿ ಹೀನರಾದವೆ. ಹಾಂಗಾಗಿ ನಮ್ಮ ಅಕಾಡೆಮಿ ಅರೆಬಾಸೆ ಸಂಸ್ಕೃತಿನ ಮತ್ತೆ ಜೀವಮಾಡ್ವ ಕೆಲ್ಸಲಿ ದೊಡ್ಡ ಹೋರಾಟನ ಮಾಡ್ತಾ ಉಟ್ಟು.

ನಾವು ಈ ವರ್ಸ ಸುಳ್ಯ, ಮಡಿಕೇರಿ, ದೇವಸ್ತೂರು, ಪುತ್ತೂರು, ಜಾಲ್ಸೂರು, ಸುಬ್ರಹ್ಮಣ್ಯ, ದುಗಲಡ್ಕ, ಹಾಲೆಮಜಲ್, ಕೊಲ್ಲಮೊಗ್ರಲಿ ಬೇರೆ ಬೇರೆ ರೀತಿನ ಕಾರ್ಯಕ್ರಮ ಮಾಡ್ತಾ ಬಂದೊಳೊ. ಅರೆಬಾಸೆ, ಲಿಪಿ, ಕೋಡಿ ಸಾಹಿತ್ಯಾ ವಿಚಾರ ಸಂಕಿರಣ, ಆಟಿಕೂಟ, ಸಿದ್ದವೇಶ, ಅರೆಬಾಸೆ ಹಾಡ್, ಸಂಗೀತ, ರಸಪ್ರಶ್ನೆ, ಹೀಂಗೆ ಹತ್ತಾರ್ ವಿಚಾರಗಳ ಕಾರ್ಯಕ್ರಮ ನಡ್ಡುಟು. ನಾವು ಅರೆಬಾಸೆ ಅಧ್ಯಯನಕ್ಕೆ ಒತ್ತು ಕೊಡುವ ಉದ್ದೇಶಲಿ ಈಗಾಗ್ಲೆ ಹತ್ತ್ ಫೆಲೋಶಿಪ್ ಕೊಟ್ಟೊಳೊ. 2019ರ್‌ಲಿ ಇನ್ನೂ ಹತ್ತ್ ಜನಕ್ಕೆ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟಿತ್.

ಇಂದ್ ನಾವು ದೊಡ್ಡ ಮಟ್ಟದ ಸಾಹಿತ್ಯ ಸಮ್ಮೇಳನ ಮಾಡ್ತಾ ಒಳೊ. ಈ ಸಮ್ಮೇಳನ ಇತಿಹಾಸಲಿ ಒಂದು ಮೈಲ್‌ಕಲ್ಲ್. ಸಮ್ಮೇಳನಲಿ ನಮ್ಮ ಅರೆಬಾಸೆನ ಸಂವಿಧಾನದ 8ನೇ ಪರಿಚ್ಛೇದಕ್ಕೆ ಸೇರ್‍ಸೊಕೂಂತ ಮತ್ತೆ ನಮ್ಮ ಸಮಾಜನ ಭಾಷಾ ಅಲ್ಪಸಂಖ್ಯಾತರ್‌ಂತ ಸರಕಾರ ಘೋಷಣೆ ಮಾಡೊಕೂಂತ ನಮ್ಮ ಬೇಡಿಕೆನ ಮುಂದೆ ಇಸ್ಯೊಳೊ. ಇದಕ್ಕೆ ಈ ಸಮ್ಮೇಳನ ಸಾಕ್ಷಿ. ಪ್ರೀತಿಸುವ ಎಲ್ಲಾ ಜಾತಿ ಜನಾಂಗದವು ಮತ್ತೆ ಅವರ ಮನೆಮಾತಾಗಿ ಇಸಿಕಂಡ್ ಕಾಪಾಡ್ತಾ

ಬಂದ ಜನ ಸಮುದಾಯ ಕುಶಿಪಡೊಕಾದ ಸಂಗತಿ. ಅದ್ ಇಂದ್ ಆವುಟು, ಆಗದೇ ಹೋಗಿದ್ರೆ ಬಹುಷ ಮುಂದೆನೂ ಆವ ಸಾಧ್ಯ ಇಲ್ಲೆ. ಯಾಕೆಂತೇಳಿರೆ ನಮ್ಮ ಮಕ್ಕ ಡಾಕ್ಟ್ರ ಇಂಜಿನಿಯರ್ ಆಕೆ ಒದ್ದಾಟ, ಗುದ್ದಾಟ ನಡ್ತಿದೆ ಹೊರತು ಒಬ್ಬ ಭಾಷಾ ವಿಜ್ಞಾನಿ ಆಕೂಂತ ಕನ್ಸ್ ಕಾಣ್ತಾನೂ ಇಲ್ಲೇಂತೇಳ್ದರ ಒಪ್ಪಿಕಣಕು. ಸಾರಾಂಶಲಿ ಹೇಳ್ದಾದರೆ ಅರೆಬಾಸೆಲಿ ವ್ಯಾಕರಣ ಪಾಂಡಿತ್ಯ ಮತ್ತು ಭಾಷಾ ವಿಜ್ಞಾನ ಮುಂದೆ ಬೆಳ್ಸುವ ಜನರ ತಯಾರ್ ಮಾಡೊಕು. ಆಗ ಮಾತ್ರ ಬಾಸೆ ಬೆಳ್ದದೆ, ಅಭಿವೃದ್ಧಿ ಆದೆ. ಕೋಡಿಯವು ಗಟ್ಟಿನ ಒಂದು ತಳಕಟ್ಟ್ ಹಾಕಿ ಕೊಟ್ಟೊಳೊ. ಅದೇ ಈ ಪುಸ್ತಕ.

ಈ ಪುಸ್ತಕನ ಅವರ ಅನಾರೋಗ್ಯದ ನೊಡುಲಿನೂ ತುಂಬಾ ಉತ್ಸಾಹಲಿ ಬರ್ದದರ ನಾ ಕಂಡೊಳೆ. ಈ ಬಾಸೆನ ಮಾತಾಡುವವನಾಗಿ ನಾ ಅಭಿನಂದನೆ ಹೇಳಿನೆ. ಇದೊಂದು ಸಾರ್ವಕಾಲಿಕ ಸಾಧನೆಂತೇಳುದು ನನ್ನ ಭಾವನೆ.

ಸುಳ್ಯ
2019ರ ಮಾರ್ಚ್ 2

ಪಿ.ಸಿ. ಜಯರಾಮ
ಅಧ್ಯಕ್ಷರ್

# ಮುನ್ನುಡಿ

ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಸ್ಥಾಪನೆ ಆದೇ ಮುಖ್ಯ ಮೂರು ಉದ್ದೇಶಕ್ಕಾಗಿ. ಒಂದು ಅರೆಬಾಸೆ ಅಧ್ಯಯನ, ಎರಡ್ನೆದ್ ಅರೆಬಾಸೆಯರ ಬಗ್ಗೆ ಸಂಶೋಧನೆ ಮೂರ್ನೆದಾಗಿ ಬರಹಗಳ ಮುದ್ರಣ ಮಾಡುದು. ನಮ್ಮ ಈಗನ ಸಮಿತಿ ಅಕಾಡೆಮಿನ ಚರಿತ್ರೆಲೆ ಸುರೂನ ಅಧ್ಯಯನ ಫೆಲೋಶಿಪ್‌ನ ಹತ್ತ್ ಜನ ಅಧ್ಯಯನ ಮಾಡೊವುಕೆ ಕೊಟ್ಟ್ ಏಕಕಾಲಕ್ಕೆ ಅಧ್ಯಯನ ನಡೆಸ್ತಾ ಉಟ್ಟು. ಈ ವರ್ಸ ಮತ್ತೆ ಹತ್ತ್ ಜನನ ಆಯ್ಕೆ ಮಾಡಿ ಫೆಲೋಶಿಪ್ ಕೊಡುವ ತೀರ್ಮಾನ ಮಾಡಿಟು.

ಅದೇ ರೀತಿ ಅರೆಬಾಸೆಲಿ ಸೃಜನಶೀಲ ಸಾಹಿತ್ಯ ರಚನೆ ಮಾಡೊವುಕೆ ಪ್ರೋತ್ಸಾಹ ಕೊಡ್ತಾ ಉಟ್ಟು. ಈ ವರ್ಸ ಸ್ವಂತ ಬರ್ದ್ ಪ್ರಕಟಣೆ ಮಾಡ್ದ ಎರಡ್ ಜನಕ್ಕೆ ಹತ್ತತ್ತ್ ಸಾವಿರ ಬಹುಮಾನ ಕೊಟ್ಟುಟು. 2019ರ ಮಾರ್ಚ್ 2ರಂದ್ ಅರೆಬಾಸೆ ಚರಿತ್ರೆನ ಸುರೂನ ಸಾಹಿತ್ಯ ಸಮ್ಮೇಳನ ನಡ್ತ್. ಇದೇ ದಿನ ನಮ್ಮ ಭವಾನಿಶಂಕರ ಅಡ್ತಲೆಯವರ "ಅಪ್ಪ ಹೇಳ್ದ ಹತ್ತ್ ಕತೆಗ" ಸೇರ್ದ ಹಾಂಗೆ ಒಟ್ಟು 5 ಪುಸ್ತಕಗಳ ಕಂತೆನ ಪ್ರಕಟ ಮಾಡಿಟು. ಅದರ್ಲಿ ಡಾ। ಕೆ. ಕುಶಾಲಪ್ಪ ಗೌಡರ ಅಧ್ಯಯನ ಪುಸ್ತಕ ಅರೆಬಾಸೆ (ಗೌಡ ಕನ್ನಡ) ವ್ಯಾಕರಣ ಪುಸ್ತಕ ಅರೆಬಾಸೆನ ಮಟ್ಟಿಗೆ ಒಂದು ದಾಖಲೆ. ಇದಲ್ಲದೆ ಪಿ. ಜಿ. ಅಂಬೆಕಲ್ ಬರ್ದ "ತಬ್ಲಿ ಮಂಜ", ಡಾ। ಪುನೀತ್ ಕುಂಟುಕಾಡ್ ಬರ್ದ "ಮಿಣ್ಚುಳಿ", ಡಾ। ಕರುಣಾಕರ ನಿಡಿಂಜಿ ಬರ್ದ "ನೆಗೆ ಬೇಕು ಕೇದೆಗೆ ಗೊನೆ ಹಾಂಗೆ" ನಿಮ್ಮ ಕೈಗೆ ಕೊಡ್ತಾ ಒಳೊ.

ಭವಾನಿಶಂಕರ ಅಡ್ತಲೆ ಕನ್ನಡ ಮತ್ತೆ ಅರೆಬಾಸೆಲಿ ಬುಡಾದೆ ಬರ್ಯತಾ ಇರುವ ಬರಹಗಾರ. ಸರಳವಾಗಿ, ಜನ ಸಾಮಾನ್ಯರ ದಿನ ನಿತ್ಯದ ವಿಷಯಗಳ ಬಗ್ಗೆ ಬರ್ದದರ ಹತ್ತಾರ್ ವರ್ಸಂದ ನಾ ಕಾಣ್ತಾ ಒಳೆ. 'ಮನ್‌ಚಿಂಟೆಲಿ' ಕಾಲಂ ಅವರ ಪ್ರಸಿದ್ಧ ಬರವಣಿಗೆ ಸುದ್ದಿ ಪೇಪರ್ಲಿ ಬಂದ ಅರೆಬಾಸೆ ಬರವಣಿಗೆಲಿ ಭವಾನಿ ಶಂಕರನವರ್ದೇ ಅತೀ ಹೆಚ್ಚ್. ಇವರ್ದ್ ಕಾಡ್‌ಕರೆನ ಹಳ್ಳಿ ಜೀವನ, ಕೃಷಿ, ತೋಟ, ಕಾಡ್‌ಪ್ರಾಣಿಗಳ ಜೊತೆಗೆನ ಬೊದ್ಕ್, ದೇವರು, ದೈವಗ, ಸಂಪ್ರದಾಯ, ಹಬ್ಬಗಳ, ಕುಟುಂಬ ವ್ಯವಸ್ಥೆ ಬಗ್ಗೆ ಅರೆಬಾಸೆಲಿ ಬಾರೀ ಪೊರ್ಲುಲಿ ಬರ್ದೊಳೊ. ಅವು ಬರ್ದದರ ಅಕಾಡೆಮಿ ಪ್ರಿಂಟ್ ಮಾಡಿ ನಿಮ್ಮ ಕೈಗೆ ಕೊಟ್ಟುಟ್ಟು. ನೀವು ಲ್ಯಾಕಿಲಿ ಓದಿ, ನಾಲ್ಕ್ ಜನಕ್ಕೆ ತಿಳ್ಸಿ. ಈ ಮೂಲಕ ಅರೆಬಾಸೆ ಬೆಳ್ಯಲಿ, ಸಮುದಾಯಕ್ಕೆ ಒಳ್ಳೆದಾದೆ. ಭವಾನಿ ಶಂಕರ್‌ನವುಕೆ ಅಭಿನಂದನೆಗ.

ಸುಳ್ಯ — **ಎ. ಕೆ. ಹಿಮಕರ**

2–3–2019 — ಸಂಚಾಲಕರು, ಪುಸ್ತಕ ಪ್ರಕಟಣಾ ಸಮಿತಿ.

# ಬರ್ದವನ ಒಡಲಾಳಂದ

ನಮ್ಮ ಹಿರಿಯರ ಬದ್‌ಕ್‌ನ ಕೆದ್ಕಿಕೆ ಹೋದರೆ, ಇಂದ್‌ನೊವುಕೆ ಮನರಂಜನೆಂತ ಅನ್ಸಿದೆ. ಇಂದ್‌ನೊವುಕೆ ಅದರ ಹೇಳಿರೆ, ಯಾವುದೋ ಜನಪದ ಕಥೆಂತ ತಿಳ್ಕಂಕೆ ಸಾಧ್ಯ ಉಟ್ಟು. ಆದರೆ ನಮ್ಮ ಅಜ್ಜಿ-ಅಜ್ಜಂದರ್, ಅಯ್ಯೆ-ಅಪ್ಪನೊವು ಬದ್‌ಕ್‌ಲಿ ಪಟ್ಟ ಕಷ್ಟಗ-ಸುಖಗಳ ನೆನ್ಸಿರೆ ನಾವೀಗ ಸ್ವರ್ಗ ಜೀವನ ಮಾಡ್ತೋ ಒಳಂತ, ಒಂದು 50 ವರ್ಷ ಪ್ರಾಯದ ಅಸುಪಾಸ್‌ನೊವುಕೆ ಕಂಡದೆ. ಏಕೆಂತೇಳಿರೆ ಈಗನ ಮಕ್ಕಳಿಗೆ ಆ ಬದ್‌ಕ್‌ನ ಕಲ್ಪನೆ ಕೂಡಾ ಇಲ್ಲೆ. ಹೇಳೀಕೆ ಹೊರ್ಟರೆ ಅದ್ ಕಥೆಯಾದೆ.

ಸುಮಾರ್ 36 ವರ್ಷಗಳ ಹಿಂದೆ, ತೆಳಿರೆ 1982ರ್ಲಿ, ನಾ ಶ್ರೀ ಕ್ಷೇತ್ರ ಧರ್ಮಸ್ಥಳದ ಮಂಜುನಾಥೇಶ್ವೇರ ಹೈಸ್ಕೂಲ್‌ಲಿ 10ನೇ ಕ್ಲಾಸ್ ಮುಗ್ಸಿದ ಕಾಲ. ಆ ಸಮಯಲಿ ಶ್ರೀ ಬಾಹುಬಲಿ ಸ್ವಾಮಿಗೆ ಶುರುನ ಮಸ್ತಕಾಭಿಷೇಕ ನಡ್ದ ವರ್ಷ. 2-3 ವರ್ಷ ಮನೆ ಬುಟ್ಟ್ ಹಾಸ್ಟೇಲ್‌ಲಿ ಇದ್ದ್, ಮನೆಗೆ ಬಾಕನ, ನಂಗೆ ನನ್ನ ಅಪ್ಪ ರಾಮಾಯಣ-ಮಹಾಭಾರತದ ತುಂಡು ತುಂಡು ಕಥೆಗಳ ಹೇಳ್ತಿದ್ದೋ. ಅದ್ ಮಾತ್ರ ಅಲ್ಲ ಆಗ ನಾವುಗೆ ಹಂಞ ಗದ್ದೆ ಬೇಸಾಯನೂ ಇತ್ತ್. ಗದ್ದೆ ಕೊಯ್ಲು ಸಮಯಲಿ ಕೈ ಹೊಡೆಕಾಕನ ಹೆಚ್ಚಾಗಿ ಹಿಂಬೊತ್ತು, ಇಲ್ಲರೆ ಕತ್ತಲೆಗೆ ನಮ್ಮ ಹಕ್ಕಲೆ- ಪಕ್ಕಲೆ ಮನೇವು ಗಂಡ್‌ಗ – ಹೆಣ್ಮಕ್ಕ ಬಾತಿದ್ದೋ. ಕೆಲ್ಸ ಲಾಯಿಕ್‌ಲಿ ಸಾಗಿಕೆ ಬೇಕಾಗಿ ಮತ್ತೆ ಬಾವಂದ್‌ರ್, ನಾದಿನಿಕ ಒಟ್ಟಿಗೆ ಇರಿಕಾಕನ, ಕುಶಾಲ್‌ನೂ ಆತ್‌ಂತ ನಮ್ಮ ಅಪ್ಪವನರ ನಿಜ ಜೀವನಲಿ ಆದ ಕಥೆನ, ಹಾಂಗೆ ಒಂದಷ್ಟೂ ಅವು, ಅವರ ಹಿರಿಯರ್‌ಂದ ಕೇಳ್ದ ಕಥೆಗಳ ಸೇರ್ಸಿ ಹೇಳ್ತಿದ್ದೋ. ಅದರ್ಲಿ ಕೆಲವು ಬೇಡದ (ಅಶ್ಲಿಲ) ಕಥೆಗಳೂ ಇರ್ತಿತ್. ಅದೂ ಕೂಡ ಬಾರೀ ಗಮ್ಮತ್‌ನ ಕಥೆಗ, ಗೂಡೆಗ ಹೈದಂಗ ಕೆಲ್ಸ ಮಾಡಿಕಾಕನ ಅವರ ಎದುರಿಗೆ ಇಂತ ಕಥೆ ಹೇಳೊವುಕೆ ಬೊಯ್ಸಿಕಂಡರೂ, ಒಳಗೊಳಗೆ ಕುಷಿ ಪಟ್ಟ್‌ಕ್‌ಂಡ್ ಕೆಲ್ಸ ಮಾಡ್ತಿದ್ದೋ. ಆದರೆ ಅದರ ಇಲ್ಲಿ ಬರೆಕಾದುಲೆಂತ ಬುಟ್ಟೊಳೆ. ಇಂತ ಕಥೆಗಳ್ಲಿ ನಾಲ್ಕ್ ಸತ್ಯ ಕಥೆಗಳ್ನ, ಆರ್ ಜನಪದ ರೀತಿನ ಕಥೆಗಳ್ನ ಸೇರ್ಸಿ ಈ ಪುಸ್ತಕಲಿ ಬರ್ದೊಳೆ. ಇದ್ ಯಾಕೆಂತೇಳ್ರೆ ಇನ್ನ್ ನನ್ನ ಅಪ್ಪನಾಂಗೆ ಮಕ್ಕಳೊಟ್ಟಿಗೆ ಕಥೆ ಹೇಳುವ ಅಪ್ಪಂದರೂ ಸಿಕ್ಕಿಕಿಲೆ. ಮನೆಲಿದ್ದ ಮಕ್ಕಳಿಗೆ ಇಂತ ಕಥೆನ ಕೇಳ್ವ ತಾಳ್ಮೆನೂ ಇರಿಕಿಲೆ. ಮುಂದೆ ನಾವು ಸಣ್ಣದರ್ಲಿ ಇರಿಕಾಕನ ಅವ್ವ-ಅಪ್ಪ, ಇಲ್ಲರೆ

ಅಜ್ಜಿ, ಅಜ್ಜಂದರ್ ಕಥೆ ಹೇಳಿಯೇ ನಮ್ಮ ಮಲ್ಗಿಸಿ ನಿಲ್ಗಿಸುತ್ತಿದ್ದೊ. ಅದ್ರೆ ಈಗನ ಮಕ್ಕ ಅಯ್ಯೆ- ಅಪ್ಪನೊಟ್ಟಿಗೆ, ಮಲ್ಗುದೂಲೇ, ಮತ್ತೆ ಮಕ್ಕ ಮಲ್ಗುವವರೇಗೆ ಅಯ್ಯೆ-ಅಪ್ಪ ಎಚ್ಚರ ಇರ್ದುಲೆ, ಹಾಂಗಾಗಿ ಇಂತ ಕಥೆಗಳ ಕೇಳಿ ಮುಂದೊಂದು ದಿನ ಯಾರಾರ್ ಮಕ್ಕಳಿಗೆ ಓದೂಕುಂತಾದರೆ, ಓದಿ ಕುಷಿ ಪಡ್ಲಿಂತ ನನ್ನ ಆಶೆ. ಆ ಲೆಕ್ಕಲಿ ಅಪ್ಪ ಹೇಳ್ದ 10 ಕಥೆಗಳ ನಿಮ್ಮ ಮುಂದೆ ಇಸ್ಕ್ಯೋಳೆ. ಈ ಕಥೇಲಿ ಬರುವ ಪಾತ್ರಗ ಕೆಲವು ಈಗಲೂ ಜೀವಂತ ಇದ್ದೋವು ಒಳೊ. ಇದ್ ಯಾರಿಗೂ ಅವಮಾನ ಮಾಡಿಕೆ ಅಲ್ಲ. ಆದರೆ ಹಿಂದೆ ಕಳ್ದದ್ ಮುಂದೆ ಇತಿಹಾಸ ಆದೆಂತ ತಿಳ್ಕಂಡ್ ಬರ್ದ್ದೋಳೆ. ಅದರೊಟ್ಟಿಗೆ ನಮ್ಮ ಹಿರಿಯವರ ನೆಂಪು ಮಾಡಿಕ್ಂಡ್ ದಾಖಲಿಸೊಳೆ. ಯಾರಿಗಾರ್ ಬೇನೆ ಆದ್ರೆ ಕ್ಷಮಿಸೊಕುಂತ ಕೈ ಮುಗ್ದ್ ಕೇಳ್ತಾ ಒಳೆ.

ನಮ್ಮಂದ ಅಳ್ಸಿ ಹೋಗುವ ಇಂತ ಕಥೆಗಳ ಬರ್‌ಸಿಕೆ ಅವಕಾಶ ಮಾಡಿ ಕೊಟ್ಟೋವು, ಕರ್ನಾಟಕ ಅರೆಭಾಷೆ ಅಕಾಡಮಿನ ಪದಾಧಿಕಾರಿಗ. ಅದರ್ಲಿ ಮುಖ್ಯ ಪಟ್ಟೋವು ನನ್ನ ಜೋಸ್ತಿ ಈಗ ಅಧ್ಯಕ್ಷರ್ ಆಗಿರುವ ಶ್ರೀ ಪಿ.ಪಿ. ಜಯರಾಮನೊವು, ಹಾಗೇ ರಿಜಿಸ್ಟರ್ ಆದ ಶ್ರೀ ಚಂದ್ರಹಾಸ ರೈ ಬಿ.ನೊವು., ಬಾರೀ ಕಡಿಮೆ ಸಮಯಲಿ ಪುಸ್ತಕ ಮುದ್ರಣಕ್ಕೆ ಕೇಳಿಕಾಕನ ಆತ್ ಬರೀನಿ ನೋಡೋಮಾಂತ ಪ್ರೋತ್ಸಾಹ ಕೊಟ್ಟ ಪುಸ್ತಕಗಳ ಪ್ರಕಟಿಸುವ ಸಂಚಾಲಕರ್, ಹಾಂಗೆ ನಂಗೆ ಬಾರೀ ವರ್ಷದ ಜೋಸ್ತಿಯಾಗಿ ಇರುವ ಎ.ಕೆ. ಹಿಮಕರನವರ ನೆನ್ಸಿಕಣೆ. ಅದಲ್ಲದೆ ಇನ್ನ್ ಕೆಲವರ ಈ ಸಮಯಲಿ ಬೇರೆಬೇರೆ ಕಾರಣಗಳ್ಲಂದ ನೆನ್ಸಿಕಣಕಾದೆ. ಅದರ್ಲಿ ಮುಖ್ಯ ಪಟ್ಟೋವುಂತೇಳಿರೆ ನಂಗೆ ಉದ್ಯೋಗ ಕೊಟ್ಟ್ ಅನ್ನದಾತ್‌ರಾಗಿ ಕಣ್ಣಿಗೆ ಕಾಂಬ, ಹಾಂಗೇನೆ ನಂಗೆ ಬರೆಕೆ ಯಾಗೋಳು ಹೇಳುವ, ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ್ (ರಿ) ಇದರ ಪ್ರಧಾನ ಕಾರ್ಯದರ್ಶಿಗ ಡಾ। ರೇಣುಕಾ ಪ್ರಸಾದ್ ಕೆ.ವಿಯವರ ಮತ್ತೆ ಅವರ ಕುಟುಂಬದವರ, ನಂಗೆ ಉದ್ಯೋಗ ಕೊಡ್ಸಿಕೆ, ನನ್ನ ಅವರ ಸ್ವಂತ ಸ್ಕೂಟರ್‌ಲಿ ಕರ್ಕಂಡ್ ಹೋಗಿ, ಕೇಳಿ ಕೊಡ್ಸಿದ, ಈ ಅರೆಭಾಷೆ ಸಾಹಿತ್ಯ ಸಮ್ಮೇಳನದ ಶುರುನ ಅಧ್ಯಕ್ಷರ್, ನಂಗೆ ಮಾರ್ಗದರ್ಶಕ್‌ರ್ ಆದ ಶ್ರೀ ಕೆ.ಆರ್. ಗಂಗಾಧರರವರ, ನೀ ಲಾಯಿಕ್ ಬರ್ದಿಯಾ, ಇನ್ ಎನಾರ್ ಬರಿ ಮಾರಯಾಂತ ಯಾಗೋಳು ಬೆನ್ನ್ ತಟ್ಟಿ ಹೇಳುವ ನನ್ನ ಗುರುಗ, ಬಾರೀ ಹೆಸರ್ ಮಾಡ್ದ ಬರಹಗಾರರ್ ಡಾ। ಪ್ರಭಾಕರ್ ಶಿಶಿಲರವರ, ನನ್ನ ಹುಟ್ಟಿ ಬೆಳ್ಸಿ ಸಾಂಕಿದ, ಈ ಕಥೆ ಬರೆಕೆ ಕಾರಣಕಾರ್ ಆದ ನನ್ನ ಅಪ್ಪ ದಿ। ಸುಬ್ಬಣ್ಣ ಗೌಡ

ಹಾಂಗೆ ಅಯ್ಯೆ, ದಿ. ಹೊನ್ನಮ್ಮನವರ, ನನ್ನೊಟ್ಟಿಗೆ ಇಂತ ಕಥೆಗಳ ಕೇಳಿಕಂಡಿದ್ದ, ಈಗ ನಮ್ಮೊಟ್ಟಿಗಿಲ್ಲದ ತೀರಿ ಹೋದ, ನನ್ನ ಅಕ್ಕ ದಿ। ಅಂಬಜಾಕ್ಷಿನ, ನನ್ನ ಸಣ್ಣದರ್ಲಿ ಸಾಂಕಿ ತೀರಿಹೋದ ನನ್ನ ಅಣ್ಣ ಜನಾರ್ಧನ ಗೌಡನ, ನಾ ಇಂತ ಒಂದು ಕೆಲ್ಸ ಮಾಡ್ತ ಒಳೆಂತ ಹೇಳಿರೆ, ಎಂತದೇ ಕೆಲ್ಸ ಒತ್ತಡ ಇದ್ದರೂ 'ಆವು ಮಲ್ಪುಲೆ' ಅಂತ ಸದಾ ಪ್ರೋತ್ಸಾಹ ಕೊಡುವ ನಾ ಕೆಲ್ಸ ಮಾಡಿಕ್‌ಂಡ್ ಇರುವ ಸಂಸ್ಥೆನ ಮುಖ್ಯಸ್ಥರ್ ಶ್ರೀ ಚಿದಾನಂದ ಗೌಡ ಬಾಳಿಲ ಇವರ, ಕಥೆಗಳ ಓದಿ ನೆಗಾಡಿಕ್‌ಂಡ್ ಅಭಿಪ್ರಾಯಗಳ ಹೇಳಿ ನನ್ನ ಎಲ್ಲಾ ಕೆಲ್ಸಗಳಿಗೆ ಯಾಗೋಳು ಪ್ರೋತ್ಸಾಹ ಕೊಡುವ ತಾಳ್ಮೆನ ಮೂರ್ತಿ, ನನ್ನ ಪ್ರೀತಿನ ಹೆಣ್ಣ್ ಶ್ರೀಮತಿ ಜಯಲತಳ, ಕಥೆ ಓದೀ ಬರೀ ಅಲ್ಲುಗ್ದರ್‌ಂದ ಅಂವ ನೆಗಾಡ್ತಾ ಉಟ್ಟುಂತ ಗೊತ್ತಾದ ನನ್ನ ದೊಡ್ಡ ಮಂಜ ನಿಶ್ಚಿತ್ ಅಡ್ತಲೆನ, ಮತ್ತು ಎರಡನೇ ಮಂಜ ದೀಕ್ಷಿತ್ ಅಡ್ತಲೆನ, ನನ್ನ ಕಾರ್‌ಲೇ ದಿನಾ ಶಾಲೆಗೆ ಬಂದ್ ಕೆಲವು ಕಥೆಗಳ ಹೇಳಿ ತಾತಂತ, ಕೇಳಿ ಕುಷಿ ಪಡ್ವು, ಕಳ್ದ್ ಹೋದ ನನ್ನ ಜುವ್ವದ ಜೋಸ್ತಿ ದಿ। ತೀರ್ಥರಾಮ ಬಿ.ಕೆ.ನ ಮಗಳ್ ಲಹರಿ ಬಿ.ಕೆ.ನ, ನಾನ್ ಬರ್ದ ಕಥೆಗಳ ಲಾಯಿಕ್‌ಲಿ ಬೆರಳಚ್ಚು ಮಾಡ್ದ, ಮತ್ತೆ ಮುಖಪುಟ ಚಿತ್ರನ ಬುಡ್ಸಿದ ಅಮರಜ್ಯೋತಿ ಪ್ರಿಂಟಿಂಗ್ ಪ್ರೆಸ್‌ನ ಶ್ರೀಮತಿ ನಾಗವೇಣಿ ದಾಮೋದರನ, ಅವ್ಕೆ ಸಹಾಯ ಮಾಡ್ದ ಶ್ರೀಮತಿ ಉಮಾದೇವಿ ಆನಂದರವರ ಹಾಂಗೆ ಶ್ರೀಮತಿ ಅನಿತ ಮೋಹನ್‌ರವರ ಇನ್ ಬೇರೆ ಬೇರೆ ರೀತಿಲಿ ಪ್ರೋತ್ಸಾಹ ಕೊಟ್ಟವರೆಲ್ಲ ಈ ಸಮಯಲಿ ಬೇರೆ ಬೇರೆ ಕಾರಣಗಳ್‌ಂದ ನೆಂಪು ಮಾಡಿಕೊಳ್ತಾ ಒಳೆ. ಈ ಬರಹಲಿ ತೊಪ್ಪುಗ ಇದ್ದರೆ ಓದಿ ತಿಳ್ಸಿ, ಇದರ ತಕ್ಕ್‌ಂಡ್ ಓದೊವುಕೆ ನಾ ಪ್ರೀತಿಂದ ಕೈ ಮುಗ್ದನೆ.

– ಶ್ರೀ ಭವಾನಿಶಂಕರ ಅಡ್ತಲೆ

# ಒಳಪುಟಲಿ



# ದೆವ್ವದ ಹರ್ಕೆ (ಸತ್ಯ ಕಥೆ)

ಹಿಂದೆಲ್ಲಾ ಗದ್ದೆ ಬೇಸಾಯ ಮುಗ್ಸಿ, ಗದ್ದೇಲಿ ಕೈ ಹೊಡೆ ಬಾಕನ, ಅಂದ್ರೆ ಕೈಲಿ ಕದ್‌ರ್ ದೊಂಡೆಲಿ ಇರ್‌ಕನ ಸುಮಾರಾಗಿ ಕಾರ್ತಿಂಗ, ಆಟಿ, ಸೋಣ ತಿಂಗಳಿಗೆ ಮುಂದೆ ಮನೆ ದೇವತೆ ತೇಳುವ ಕಲ್ಲುರ್ಟಿಗೆ (ಪಾಶಾಣ ಮೂರ್ತಿ), ಗುಡ್ಡೆದೆವ್ವ ತೇಳುವ ಗುಳಿಜಂಗೆ ಹರ್ಕೆ ಕೊಡ್ತು ಪದ್ದತಿ. ಕಲ್ಲುರ್ಟಿಗೆ ಮನೇಲಿ ಹರ್ಕೆ ಕೊಟ್ಟರೆ, ಗುಳಿಗಂಗೆ ಗುಡ್ಡೇಲಿ ಯಾದಾರು ಕಾಯರ ಮರದ ಬುಡಲಿ ಕಲ್ಲು ಹಾಕಿಕೆಂಡ್ ಕೋಳಿಗೈಪು ಹುಗ್ಗೆ, ರೊಟ್ಟಿ ಎಲ್ಲ ಮಾಡಿ ಬಳ್ಸುದು. ಆಮೇಲೆ ಬಂದವೆಲ್ಲ ಅಲ್ಲಿಯೇ ಉಂಡು ಮನೆಗೆ ಬಾದು ಬಾಳ ಹಿರಿಯರಿಂದ ನಡ್ಕೊಂಡ್ ಬಂದ ಪದ್ದತಿ. ಗುಳಿಜನ ಹರ್ಕೆಗೆ ಹೆಣ್ಣ್ ಮಕ್ಕ ಹೋಕೆ ಇಲ್ಲೆ. ಆದ್ರೆ ಕಲ್ಲುರ್ಟಿ ಹರ್ಕೆ ಮಾತ್ರ ಮನೇಲಿ ಮಾಡ್ದರ್‌ಂದ ಹೆಣ್ಣ್ ಮಕ್ಕ ನೆಂಟ್ರಗ್, ಕುಟುಂಬದವು ಸೇರಿ ಮಾಡ್ತು ಹೆಚ್ಚಿನವರ ಮನೇಲಿ ನಡ್ದ್ ಬರುವಂತದ್ದು. ಕೆಲವು ಕುಟುಂಬಗಳ್ಲಿ ಐನ್ ಮನೆ ಅಥವಾ ತಳ ಮನೇಲಿ ಎಲ್ಲ ಕುಟುಂಬದವು ಸೇರಿ ಕೋಳಿ ರೊಟ್ಟಿ ಮಾಡುವೆ. ಈಗೀಗ ಅವರವರ ಮನೆಗಳಲ್ಲೆ ಕಲ್ಲುರ್ಟಿಗೆ ಹರ್ಕೆ ಕೊಡ್ದರ ನಾವು ಅಳವಡಿಸಿಕಂಡ್ ಒಳೊ. ಈ ರೀತಿ ದೆವ್ವ ದೇವ್ರುಗೆ ಕೊಡುವ

ಪದ್ಧತಿನ ಬೇಸಾಯ ಇತ್ತ್‌ಲರೂ; ಈಗಳೂ ನಾವು ಬೆಳ್ಸಿಕಂಡ್ ಬಂದೊಳೊ. ಹಾಂಗೆ ಬೆಳೆ ಪೈರಿಗಳ ಮಾರಿ ಬೀರಿ ತೆಗ್ಯೊದು, ಮನೆ ತುಂಬುಸುದು, ಹೊಸ್ತು, ಎಲ್ಲಾ ಈಗೀಗ ಮಾಯ ಆಗುಟು. ಎಲ್ಲಿಯೋ ತಳ ಮನೆಗಳ್ಳಿ, ದೇವಸ್ಥಾನಗಳ್ಳಿ ಮಾತ್ರ ಈಗೀಗ ಹಞ ಒಳ್ದುಟು. ಏನ್ ಮಾಡಿಕಾದೆ ಹೇಳಿ.

ಮನೆ ತುಂಬಿಸುದು ತೇಳಿಕಾಕನ ನಮ್ಮಲ್ಲಿ ಇತ್ತೀಚೆಗೆ ನಡ್ಡ ಒಂದು ಸಂಗತಿ ನೆಂಪಾತ್. ನಮ್ಮ ನೆರೆ ಮನೆವು ಒಬ್ಬ ಮನೆ ತುಂಬಿಸುವ ಸಂಪ್ರದಾಯನ ಬುಡಿಕೆ ಬೊತ್ತ್‌ಂತೇಳಿ ಮನೆ ಎಲ್ಲ ಕರಿ ಕಾಡ್‌ಗಳ ಗುಡ್ಸಿ ಸ್ವಚ್ಚ ಮಾಡಿ, ಒಂದು ಒಳ್ಳೆ ದಿನ ನೋಡಿ ಮನೆ ತುಂಬಿಸೋಕೂಂತ ತೀರ್ಮಾನ ಮಾಡ್ದೊ. ಹಾಂಗೆ ಬೊಳ್ಪುಗೆ ಬೇಗ ಎದ್ದ್ ದೇವರ ದೀಪ, ಮಣಿ, ಸೇರ್, ಪಾವುಗಳೆಲ್ಲ ತೊಳ್ದು ಕ್ಲೀನ್ ಮಾಡಿ, ಬೇಗ ಮನೇವು ಎಲ್ಲಾ ಮೀದ್, ಮನೆ ಯಜಮಾನ ಪಾಪ ಲಾಯಿಕ್ ಮೀದ್, ಗಂದ ಎಲ್ಲಾ ಅರ್ದ್, ಒಂದು ದಿನಕೆ ಮುಂದೇನೇ ಕದರ್‌ನೊಟ್ಟಿಗೆ ಕಟ್ಟುವ ಪೊಲಿ ಬೊಳ್ಳಿ, ನರಿಕೊಂಬು ಸೊಪ್ಪು, ಸೊಂತೆ ಬೊಳ್ಳಿ, ಹಾಂಗೆ ಕಟ್ಟಿಕೆ ಗಬ್ಬಲ್ ಬೊಳ್ಳಿ ಎಲ್ಲಾ ತೆಗ್ದ್ ತಡ್ಪೇಲಿ ಇಸಿ ಕದರ್ ತಾಕೆಂತೇಳಿ ಬಿಳಿ ತೊರ್ತು, ಮತ್ತೆ ಬಿಳಿ ಮುಂಡಾಸ್ ಕಟ್ಟಿ ಗದ್ದೆಗೆ ಹೊರ್ಟ್ ಹೋದವೆ. ಆದರೆ ಈಗ ಗದ್ದೆ ಬೇಸಾಯ ಇಲ್ಲೆ, ಇನ್ನ್ ಏನ್ ಮಾಡ್ದೊಂತ ಸುಮಾರು ಅರ್ಧ ಕಿಲೋಮೀಟರ್ ದೂರದ ದರ್ಖಾಸು ಮನೇಲಿ ಗದ್ದೆ ಬೇಸಾಯ ಉಟ್ಟು. ಅವುಕೆ ಗೊತ್ತಾಕೆ ಮುಂದೆ ತರೋಕುಂತ ಹೋದೊ. ಪೊಲಿಪೊಲಿಯೇ ಬಾಂತ... ಮನೆಂದಲೇ ಶುರು ಮಾಡ್ದೊ. ಹಾಂಗೆ ಅವರ ಶುರುನ ಗದ್ದೇಲಿ ಲಾಯಿಕ್ ಜಯ ಬತ್ತ್ ಬೆಳ್ದ್ ಇತ್ತ್. ಮೆಲ್ಲಂಗೆ ಗದ್ದೆ ಪುಣೀಲಿ ಕುದ್ದ್ ನಾಲ್ಕೈದ್ ಕದ್‌ರ್ ತೆಗ್ದಳಷ್ಟೆ. ಅವರ ಮನೇಲಿ ಎರಡ್ ಹುಲಿನಾಂಗೆ ಇದ್ದ ನಾಯಿಗ ಬೊಗ್‌ಳಿಕಂಡ್ ಬಂದದೇ ಇವರಕ್ಕಲೆ. ನಾಯಿಗಳ ನೋಡಿಕನ ಒಮ್ಮೆ ಅವ್ಕೆ ಉಸಿರ್ ನಿತ್ತೇ ಹೋಗುಟು. ಗದ್ದೇನ ಕೆಳಗೆ ಚೋಡಿ ಹರೀತೀತ್, ಹೇಂಗೆಂತ ಗೊತ್ತ್‌ಲೆ ಗದ್ದೆ ಪುಣೀಂದ ಒಮ್ಮೆಲೆ ಚೋಡಿಂದ ಕಡ್ಪ ಹಾರಿ, ಬದ್ಕ್‌ರೆ ಬೇಡಿ ತಿಂಬೆಂತ ಹರಿ ಬಿದ್ದ್ ಓಡ್ದೊ. ನಾಯಿಗ ಒಟ್ಟಿಗೆ ಬೆರ್ಸಿದೊ. ಓಡ್‌ಕನ ಕೈಲಿದ್ದ ಕದ್‌ರ್‌ನ ಕೂಡಾ ಅಲ್ಲಿಯೇ ಹೆರ್ಕಿಟ್ ಓಡ್ದೊ. ಹೋಕಾನ ಪೊಲಿ ಪೊಲಿ ಇಲ್ಲೆ, ಕಟ್ಟಿದ ಮುಂಡಾಸ್ ಇಲ್ಲೆ. ಎಲ್ಲೋ ಬಿದ್ದು ಹೋಗುಟು ಪಾಪ! ಅಂದ್‌ದ ಅವು ಮನೆ ತುಂಬಿಸುವುದರ ನಿಲ್ಸಿದೋ. ಈಗ ಕೇಳಿರೆ ಹೇಳುವೆ, ಅಂಗಡಿಂದ ಅಕ್ಕಿ ತಂದ್ ತಿಂಬೊವುಕೆ ಯಾರ್ಯಾರ ಗದ್ದೆಂದ ಕದ್ದ್ ಕದರ್ ತಂದ್ ಮನೆ ತುಂಬ್ಸುವ ಕೆಲ್ಸ ಬೇಡಣ್ಣಂತ.

ನಾ ಹೇಳಿಕೆ ಹೊರ್ಟ್‌ದ್ ಕಲ್ಲುರ್ಟಿ ಹರ್ಕೆನ ಕಥೆ. ನಾ ಸಣ್ಣದರ್ಲಿ ಇರಿಕಾಕನ ಒಮ್ಮೆ ನಮ್ಮ ಸಣಪ್ಪನಲ್ಲಿ ದೆವ್ವದ ಹರ್ಕೆಗೆ ಹೋಗಿದ್ದೆ. ಸಣಪಂಗೆ

ಐದು ಜನ ಗಂಡ್ ಮಕ್ಕ, ಆರ್ ಜನ ಹೆಣ್ಣ್ ಮಕ್ಕ ಒಂದು ಡಜನ್‌ಗೆ ಒಂದೇ ಕಮ್ಮಿ. ತುಂಬು ಕುಟುಂಬ ನೋಡಿಕೆ ಲಾಯಿಕ್ ಇತ್ತ್. ನಮ್ಮ ಅಪ್ಪಂಗೆ ಎರಡ್ ಗಂಡ್, ಮೂರು ಹೆಣ್ಣ್ ಮಕ್ಕ ಹೀಂಗೆ ಒಟ್ಟು ಐದ್ ಮಕ್ಕ. ನಾ ಹೆಚ್ಚಾಗಿ ಸಣಪನಲ್ಲಿಗೆ ಹೋತ್ತಿದ್ದೆ. ಏಕೆಂತೇಳಿರೆ ನಮ್ಮಲ್ಲಿ ಆಡಿಕೆ ಯಾರ್ ಇತ್ತ್‌ಲೆ. ನಮ್ಮಲ್ಲಿ ನನ್ನೊಟ್ಟಿಗೆ ಅಕ್ಕ ಆಡಿಕೆ ಬಂದರೂ ಬೇಗ ಜಗಳ ಪೆಟ್ಟ್ ಎಲ್ಲಾ ಆತೀತ್. ದೆವ್ವದ ಹರ್ಕೆ ದಿನ ನಾ ಹಜ ಬೇಗ ಸಣಪನಲ್ಲಿಗೆ ಹೋಗೋಳೆ. ಆದ್ರೆ ಸಣಪ ಮಾತ್ರ ದೆವ್ವದ ಹರ್ಕೆ ವಿಷಯಲಿ ಇಲ್ಲೆ. ಅವು ಅಂಗಡಿಗೆ ಹೋಗಿ ಕಳ್ಳ್ ಕುಡ್ಕಂಡ್ ಅಲ್ಲಿಯೇ ಇದ್ದೆಳೊ. ಸಣಪನ ದೊಡ್ಡ ಮಜ ಮತ್ತೆ ಮೂರುಜನ ಸೇರಿ ಕೋಳಿ ಕೊಂದ್ ರೊಟ್ಟಿ ಎಲ್ಲ ಮಾಡಿ ಕತ್ತಲೆ ಕತ್ತಲಾಕನ ರೆಡಿ ಆಗುಟು. ದೆವ್ವಕ್ಕೆ ಬಳ್ಸಿಕೆ ಮುಂದೆ, ದೊಡ್ಡ ಅಣ್ಣ ಯಾರಿಗೂ ಗೊತ್ತಿಲ್ಲದೆ ಮೀದ್ ಬಾಕೆಂತ ಹೋದಂವ ಮೆಲ್ಲ ಕಳ್ಳ್ ಅಂಗಡಿಗೆ ಹೋಗುಟು. ಸುಮಾರ್ ಅರ್ಧ ಗಂಟೆ ಕಳ್ದ್ ಕೈಲೀ ಒಂದು ಕುಪ್ಪಿ ಕಳ್ಳ್ ಹಿಡ್ಕಂಡ್ ಹೊಳ್ಳರ ಪಳ್ಳರ ಬಂದದೆ. ಎರಡನೇ ಅಣ್ಣ ಕೇಳ್ತ್; ನೀ ಎಲ್ಲ್ ಹೋದ್ ಮಾರಾಯಾಂತ. ನಾ ದೆವ್ವಕೆ ಕಳ್ಳ್ ತಾಕೆಂತ ಹೋದೆ. ಮತ್ತೆ ದೆವ್ವಕೆ ಕಳ್ಳ್ ಇಸಿಕಿರ್ದು ನಿಂಗೆ  ಹೇಂಗೆ ನೆಂಪು ಆಕುಂತ ಇವಂಗೇ ಜೋರ್ ಮಾಡ್ತ್. ಎಂತ ಹೇಳ್ತ  ಉಟ್ಟುಂತ ನಾವ್ಗೆ ಗೊತ್ತಾತ್‌ಲೆ. ಯಾಕೆಂತೇಳ್ರೆ ನಾಲಿಗೆ ಸೆರಿ ಒದರ್‌ತಿತ್ತೆ. ಎರಡ್‌ನೆವ ಮಾಸ್ತ್ರ, ಪಾಪ ಅವಂಗೆ ಕಳ್ಳ್ ಹೇಂಗೆ ನೆಂಪಾದು? ನಾವೇ ಮಕ್ಕ ಮಾತಾಡಿಕಂಡೊ.

ಇನ್ ದೆವ್ವಕ್ಕೆ ಬಳ್ಸಮೊಲ್ಲಂತ ಹಿಂದಕೆ ಅಣ್ಣನೊಟ್ಟಿಗೆ ಹೇಳ್ತ್. ದೊಡ್ಡ ಅಣ್ಣಂಗೆ, ಪೂಜಾರಿ ಮಾಡೊವಂಗೆ ಮೆಟ್ಟ್ ಹತ್ತಿಕೇನೆ ಆದುಲೆ. ಮಕ್ಕ ಸೇರಿ ರಟ್ಟೇಲಿ ಹಿಡ್ದ್ ಹೇಂಗೋ ಮೆಟ್ಲು ಹತ್ತಿಸಿದೊ. ಒಂದು ಮೆಟ್ಟ್ ಹತ್ತ್‌ಕನ ಎರಡ್ ಮೆಟ್ಲ್ ಹಿಂದೆ ಬಾತಿತ್. ಮಕ್ಕ ನೆಗಾಡಿಕಾಂಡ್, ಬೊಬ್ಬೆ ಹಾಕಾಂಡ್ ಹತ್ತಿಸಿದೊ. ಮಾಸ್ತ್ರ ಅಣ್ಣಂಗೆ ಆತ್, ಇವನೊಟ್ಟಿಗೆ ದೆವ್ವಕೆ ಬಳ್ಸಿಕೆ ಹೇಳಿರೆ ಇಂವ ಎಡೆ ಮೇಲೆ ಬೀಳ್ದ್ ಗ್ಯಾರಂಟಿ. ಏನ್ ಮಾಡೋಕೂಂತ ಕೋಪಲಿ ಅಣ್ಣಂಗೆ ಎರಡ್ ಬೊಯಿತ್. ಎಂತ ಮಾರಾಯ ದೆವ್ವಕೆ ಬಳ್ಸಿಕೆ ಮುಂದೆ ನಿಂಗೆ ಲೋಕಾನೇ ಇಲ್ಲೆ. ನಿನ್ನ ದೆವ್ವನ ನಾವು ನೋಡೊಕಷ್ಟೆ. ಅಷ್ಟು ಬೇಗ ನಿನ್ನ ಜೀವ ಎಳ್ದದಾ? ಏನ್ ಮತ್ತೆ ಕುಡೀಕೆ ಆಕಿತ್‌ಲಾಂತ ಬೊಯ್ಯಕನ, ಅವಂಗೆ ಅದ್ ಕ್ಯಾರೆ ಇಲ್ಲೆ. ದೆವ್ವಕೆ ಬಳ್ಸಿಕೆ  ಎ...ಎಂತ ನಾ ಇಲ್ಲೆನಾಂತ ಅವಂದ ಜಾಸ್ತಿ ಇವಂ ಜೋರು ಮಾಡ್ತ್. ಹಾಂಗೆ ಮೂರನೇಯವನೊಟ್ಟಿಗೆ ದೆವ್ವಕೆ ಬಳ್ಸಿಕೆ ಹೇಳಿ ಆತ್. ಮೂರು ಕೊಡಿ ಬಾಳ್ಳೆ ಹಾಕಿ; ಬಾಳ್ಳೆ ಎದ್‌ರ್ ಮಣೆ ಇಸಿ, ಮಣೀಲಿ ದೀಪ ಹೊತ್ತ್‌ಸಿ  ಇಸೀತ್. ಕೊಡಿ ಬಾಳ್ಳೆಗೆ ರೊಟ್ಟಿ

ಕೋಳಿ ಗೈಪು ಇಕ್ಕಿತ್. ಒಂದು ಎಡೆಗೆ ಬಟ್ಟಕ್ಕಾ ಇನ್ನೊಂದು ಎಡೆಗೆ ಕರಿಯಡ ಹಾಕಿ ಅದರ ಮೇಲೆ ಹಞ ಗೈಪುನು ಹಾಕಿತ್. ಒಂದು ಎಲೆನ ಬಲಬಾಗಲಿ ಹಞ. ಎದುರ್ ಹಾಕಿ ಅದ್ಕೇನ ಕೋಳಿಗೈಪು ಇಕ್ಕಿತ್. ಅದ್ ಬಹುಶಃ ಕೊಲೆಗಳಿಗೆ ಆಗಿರುಕೂಂತ ನಾವು ಮಾತಾಡಿಕೊಂಡೊ. ಪ್ರತೀ ಎಡೆಗೆ ಒಂದೊಂದು ಎಲೆ ಅಡಿಕೆ ಹೋಳು ಇಸಿದೊ. ಅರ್ದ ತಂದ ಗಂದನ ವೀಳ್ಯದೆಲೆಗೆ ಕೊಡ್ಕಿ ಆತ್. ಎರಡ್ ಎಡೆಗೆ ಕೋಲ್‌ತ್ರಿ ಕುತ್ತಿ ಆತ್. ಮೂರು ಕಳ್ಳಿಲಿ, ಬೆಲ್ಲದ ನೀರು ಒಂದರ್ಲಿ, ಮಸಿ ತುಂಡು ನೀರ್ ಮತ್ತೊಂದರ್ಲಿ ಕಳ್ಳ್ ಸರಾಯ ಹೊಯ್ದ್ ಇಸಿ ಆತ್. ಬಾಳ್ಲೆ ಕೊಡಿಗೆ ನೆಣಿ ಇಸಿ ಸೇರ್ದವು ಎಲ್ಲ ಗಂಧನ ಹಾಕೊಂಡೊ. ಮನೆವಕ್ಕೆಲ್ಲಾ ಕರ್ಡ್ ಎಲ್ಲೊವುಕೆ ಅಕ್ಕಿ ಕೊಟ್ಟು ದೊಡ್ಡೋವು ಮುಂದೆ. ಮಕ್ಕ ಎಲ್ಲ ನಾವು ಹಿಂದೆ ನಿತ್ತೊ. ಎರಡನೇ ಅಣ್ಣ ದೊಡ್ಡಣ್ಣನ ಕರ್ತ್ ಬಾ ಮಾರಾಯ ಹೇಳಿಕಾಂಕೆ ಆದ್ರ ಒಮ್ಮೆ ಎದ್ರುಂತ. ದೊಡ್ಡಣ್ಣ ಕುದ್ದಲಿಂದನೇ ನೀ... ನೀನೆ ಹೇಳಿಕಾ ಅದ್ಕೇನ್ ನಾನೇ ಹೇಳುಕುಂತಾ ಉಟ್ಟಾ? ದೆವ್ವ ಎಲ್ಲವುಕೆ ಒಂದೇ ಅಲ್ಲಂತ ತೊದಲಿ ತೊದಲಿ ಹೇಳ್ತ್. 2ನೇ ಅಣ್ಣಂಗೆ ಸಿಟ್ಟ್ ಬಾತ್. ನೀ ಮತ್ತೆ ಎಂತ ಪೂಜಾರಿ ನೀ ಹೇಳದೇ ನಾವು ಹೇಳ್ರೆ ಸರಿ ಅದೇನೋ ಬಾಂತ ಹೇಳಿ ಅವನ ಕೈ ರಟ್ಟೆಲಿ ಹಿಡ್ದ್ ನೇಚಿತ್. ಒಟ್ಟಿಗೆ ಇನ್ನೊಂದು ಅಣ್ಣನೂ ಸೇರಿ ಎದ್ದು ನಿಲ್ಸಿದೋ. ನಾವು ಮಕ್ಕಳಿಗೆ ಆಗಳೇ ನೆಗಾಡಿಕೆ ತಡ್ಯಾಕೆ ಬೊತ್ತು. ಹೆಂಗೋ ಎಡೆ ಇಕ್ಕಿದ ಎದ್‌ರ್‌ನ ಗೋಡೆಗೆ ಅವನ ಒರ್ಗ್‌ಸಿ ನಿಲ್ಸಿ, ಹಾಂ ಈಗ ಹೇಳಿಕಾಂತ ಅಣ್ಣ ಹೇಳ್ತ್. ಇಂವ ಶುರು ಮಾಡ್ತ್. ಎಂತೆಂತ್ರೇಳಿರೆ ದೆವ್ವಕ್ಕ ಕೊಡಿಕಾಕನ ಚೂರು ಲೇಟಾತ್ ಯಾ.. ಯಾಕೆಂತ ಹೆ.. ಹೇಳ್ರೆ ಮುಂದೆ ಒಂದು ಕೋಳಿ ಇ... ಇದ್ದದರ ಕಾ.. ಕಾಡು ಕೊತ್ತಿ ಹೊ.. ಹೊತ್ತತ್. ಹಾಂಗೆ ಈಗ ಪ..ಪಗರಕೆ ಆಚೆ ಮನೇಂದ ತಂದ್ ಕೊ.. ಕೊಡ್ತಾ ಒಳಾದ್‌ಂತ ಹೇಳ್ತಾ ಇರಿಕಾಕನ ಮಕ್ಕಾ ಮುಸಿ ಮುಸಿ ನಗಾಡಿಕೆ ಶುರು ಮಾಡ್ದೊ. ಅಷ್ಟೊತ್ತಿಗೆ ನಾಲ್ಕನೇ ಅಣ್ಣಂಗೆ ನಗೆ ತಡ್ಯಾಕೆ ಆಗದೆ ಕುಯಿಂಕ್‌ಂತ ನೆಗಾಡಿ ಹೋತ್. ಮುಂದೇನೆ ಕೋಪಲಿ ಇದ್ದ ಮಾಸ್ತ್ರ ಅಣ್ಣ ಅವನ ತಲೆಗೆ ಟೊಕ್ಕಂತ ಕುಟ್ಟಿತ್. ಇದರ ನೋಡಿ ಅವಂನ 2ನೇ ಪೂಜಾರಿ ಮಾಡಿ ಎಡೆ ಬಳ್ಸಿದ ಅಣ್ಣಂಗ ಇನ್ನೂ ನೆಗೆ ತಡ್ಯಾಕೆ ಆತ್‌ಲೆ. ಇನ್ ನಾ ನೆಗಾಡಿರೆ ನಂಗೂ ಪೆಟ್ಟ್ ಬಿದ್ದುದೆಂತ ಅಂವ ಅಲ್ಲಿಂದ ಪುಸ್ಕಾಂತ ಬಾಯಿಗೆ ಕೈ ಹಿಡ್ಕೊಂಡು ಹೊರಗೇನೇ ಓಡ್ತ್. ದೊಡ್ಡಣ್ಣ ಹೇಳಿಕೆನ ಮುಂದುವರ್ಸಿತ್.

ಇಂದ್ ಮಾಡ್ದ ಅಡ್ಗೇಲಿ ಆಗಲಿ, ಕೊಂದ ಕೋಳಿಲಿ ಆಗಲಿ ಮಿ...ಮೀದ ನೀರ್‌ಲಿ ಆ...ಆಗಲಿ, ಬಳ್ಸಿದ ಎಡೇಲಿ ಆ... ಆಗಲಿ ಅನೇಕ ತರದ ತೊ...ತೊಪ್ಪು

ಇರ್ದು ಆ.... ತೊಪ್ಪುನೆಲ್ಲ ಒಪ್ಪುಸಾರ್ಸಿಕ್ಂಡ್ ನ....ನಮ್ಮ ಮಕ್ಕ ಮರಿಗಾಗಲಿ, ಬೆಳೆ ಪೈರಿಗಾಗಲಿ, ದನ ಕರ್‌ಗಳಿಗಾಗಲಿ ಏನೊಂದು ತೊಂದರೆ ಬಾರ್‌ದಾಂಗೆ ಬೇಲಿಯಾಗಿ ನಿಂತ್ ಕಾಪಾಡುವ ಪುಣ್ಯ ಕೀ.... ಕೀರ್ತಿ ಆ ಕಲ್ಲುರ್ಟಿ ದೈವಕ್ಕೆ ಸೇರ್ದ್. ಇದ್ ನಾ ಹೇಳುವ ಭಿನ್ನೆ ಅಲ್ಲ ನ... ನಮ್ಮ ಹಿರಿಯೋವು ಹೇಳ್ದ್‌ಂತ ಹೇಳಿಕಂಡ್ ಹೇಂಗಾರ್ ಹೇಳಿ ಮುಗ್ಸಿತ್. ಒಟ್ಟಿಗೆ ಮಾಸ್ಟ್ರ ಅಣ್ಣ ಸೇರ್ಸಿಕಾಂತ್ ಈಗ ಮಕ್ಕ ಎಲ್ಲಾ ಚೂರು ನೆಗಾಡ್ದೊ. ಆದ್ರೆ ದೆವ್ವದ ಮೇಲೆ ಮಕ್ಕಳಿಗೆ ಭಕ್ತಿ ಉಟ್ಟು. ಎಂತಾರ್ ತಪ್ಪುಗ ಇದ್ರೆ ಆ ದೆವ್ವನೇ ನಮ್ಮ ತಿದ್ದೋಕೂಂತ ಹೇಳಿ ಎಲ್ಲವು ಅಕ್ಕಿ ಹಾಕಿಂತ ಹೇಳ್ದೊ. ನಾವು ಎಡೆ ಬಳ್ಸಿದ ಕಡೆ ಅಕ್ಕಿ ಹಾಕಿ ಕೈ ಮುಗ್ದಾಕನ; ಎಲ್ಲವು ಒಮ್ಮೆ ತಿರ್ಗಿ ನಿಲ್ಲಿಂತ ಮಾಸ್ಟ್ರ ಅಣ್ಣನೇ ಹೇಳ್ತ್. ಎಲ್ಲವು ತಿರ್ಗಿ ನಿತ್ತ್ ಆತ್. ಹಞ ಹೊತ್ತಾಲಿ ಹೂಂ.. ಸಾಕುಂತ ಹೇಳಿ ಎಡೆಗೆ ಚೊಂಬ್‌ಂದ ನೀರ್ ಹಾಕಿ ಚೂರು ಚೂರು ಎಡೆನ ಎದ್‌ರ್ ಎಳ್ದೊ. ದೊಡ್ಡಣ್ಣ ಹಾಂಗೆ ಹರ್ಕಂಡ್ ಹೋದಾಂಗೆ ಹೋಗಿ ಬೆಂಚೀಲಿ ಮಲ್ಗಿತ್. ಮಾಸ್ಟ್ರಣ್ಣ ಮಕ್ಕಳೇ ಎಲ್ಲ ಕುದ್ರಿ ಉಂಬಕೇಂತ ಹೇಳ್ದೊ. 2ನೇ ಪೂಜಾರಿ ಅಣ್ಣನ ಮಾಸ್ಟ್ರ ಕರ್ತ್. ಅದ್ರೆ ಅಂವನ ಪತ್ತೆನೇ ಇಲ್ಲೆ. ಅಂವ ಆಗ ಬಾಯಿಗೆ ಕೈ ಹಿಂಡ್ಕಂಡ್ ಓಡ್ದಾಂವ ಸೀದಾ ಕಳ್ಳ್ ಅಂಗಡಿಗೆ ಹೋಗುಟು. ಪಾಪ ಇಷ್ಟೆಲ್ಲಾ ಮಾಡಿ ಊಟಕಾಕನ ಇಲ್ಲೆಂತ ನಾವೆಲ್ಲ ಮಾತಾಡಿಕಂಡೋ. ದೊಡ್ಡಣ್ಣನ ಊಟಕೆ ಕರ್ದರೆ ಅಂವ ಮಾತಾಡ್ತೇಲೆ. ನೀವು ಉಣಿಂತ ಒಮ್ಮೆ ಏನೋ ಹೇಳ್ದಾಂಗೆ ಆತ್. ಅಂತೂ ಇಂತೂ ನಾವು ಮಕ್ಕ ಮನೇವುಂತ ಸೇರಿ ದೆವ್ವದ ಹರ್ಕೆ ಊಟನ ಮಾಡ್ದೊ. ಕೋಳಿ ಗೈಪುಗೆ ಹಾಕಿದ ಉಪ್ಪು ಹಞ ಕಡಿಮೆ ಆಗಿತ್. ಅದ್ ಅಂದಾಜಿಗೆ ಹಾಕುದಲ್ಲ ಹಾಂಗೆ. ಇದ್ದ ಗೈಪುಗೆ ಉಪ್ಪು ಹಞ ಹಾಕ್ಯಾಕನ ಸಾರ್‌ನ ರುಚಿನೇ ಬೇರೆ. ಇದ್ ಹೇಂಗೆ ಇಷ್ಟ್ ರುಚಿ ಆದು... ನಾವು ಮೂಮೂಲಿ ಗೈಪು ಮಾಡಿರೆ ಹೀಂಗೆ ಆದುಲೆ ಯಾಕೆಂತ ನಾವು ಮಾತಾಡಿಕಂಡೊ. ಅದರ ಕೇಳ್ದ ಮಾಸ್ಟ್ರ ಅಣ್ಣ ಹೇಳ್ತ್; ಅದ್ ದೆವ್ವದ ಶಕ್ತಿ ಮಕ್ಕಳೇ.... ಹಾಂಗೆ ಇಷ್ಟ್ ರುಚಿ ಆದ್. ಆಗ ನೀ ನೆಗಾಡ್ದ್‌ವು ಎಲ್ಲಾ ದೈವದೊಟ್ಟಿಗೆ ತೊಪ್ಪಾತ್‌ಂತ ಕೇಳಿಕಾಂಕು ಗೊತ್ತಾತ್‌ಲ್ಲೆ. ನಿಮ್ಮ ಪರವಾಗಿ ನಾ ಹೇಳ್ಯಳೆ. ಆದರೆ ನೀವು ಕೂಡಾ ಹೇಳಿಕಾಂಕುಂತ ಹೇಳ್ತಾ, ನಾವೆಲ್ಲಾ ಹುಂ ಕುಟ್ಟಿಕಂಡ್ ದೆವ್ವದ ಹರ್ಕೆನ ಉಂಡೊ.

* * * * *



# ಶೇಷಣ್ಣ.. ಆನೆ ಬಾತ್ (ಸತ್ಯ ಕಥೆ)

ಸುಮಾರ್ ಐವತ್ತು - ಅರುವತ್ತು ವರ್ಷಗಳ ಹಿಂದೆನ ಕಥೆ ಇದ್. ಸತ್ಯ ಕಥೆ. ಆಗನ ಕಾಲಲಿ ಬೇಸಾಯ ಬುಟ್ರೆ, ಅಡಿಕೆ ತೋಟ ಸಹ ಕೆಲವು ಜನಕೆ ಮಾತ್ರ ಇತ್ತ್. ಗೈಮುಗೆ ಹಾಕಿಕೆ ತಕ್ಕ ಚಾಳೆಗಳ ಕಟ್ಟಮುಣಿ ಮೇಲೆ ನೆಟ್ರೆ, ಮತ್ತೆ ಚೂರು ಬಾಳೆಗ, ಒಳ್ಳೆಮೆಣ್ಸ್, ಬೀಜ ಹೀಂಗೆ ಹೇಳಿಕೋಂಬಂತಹ ದುಡ್ಡುನ ಬೆಳೆಗ ಯಾವುದ್ ಇತ್ಲೆ. ಆಗ ಮನುಷ್ಯಂಗೆ ಮಾತ್ರ ತುಂಬಾ ಕುಶಿ. ಗದ್ದೆ ಬೇಸಾಯಕ್ಕೆ, ನೇಜಿಗೆ, ಮುಂಡಿ ಬಿತ್ತಿಗೆ ಬರುವ ಹೆಣ್ಮಕ್ಕಳಿಗೆ ಗಂಡಸರ್ ನೀರು ಚೋಂಪುದು, ಹಳೆ ಕಥೆಗಳ ಹೇಳ್ದು, ಗೊಬ್ಬರ ಹೊರ್ಸಿರೆ ಪಾಪ ಅದರ ನಡುಲಿ ದೊಡ್ಡ ಕಲ್ಲ್‌ನ ಇಸಿ ಹೆಣ್ಮಕ್ಕಳಿಗೆ ಹೊರ್ಸುದು. ಹೀಂಗೆ ಏನೆಲ್ಲಾ ಉಪದ್ರ ಮಾಡಿ ಕುಸಿಪಡ್ದು ಆಗನ ಕಾಲಲಿ ನಡೇತಿತ್ತು.

ಬೇಸಾಯ ಕಾಲಲಿ ಬೇಸಾಯ. ಉಳ್ದ ಸಮಯಲಿ ಬೆಡಿ ಹಿಡ್ಕಂಡ್ ಬೇಟೆಗೆ ಹೋದು. ಊರ್ಲಿ ಎಲ್ಯಾರ್ ತಾಳ ಮದ್ದಳೆ ಇದ್ದರೆ ಅದರ ಕೂಟಕ್ಕೆ ಸೇರ್ದು, ಹೀಂಗೆ ಬಾರಿ ಕುಶಾಲಲಿ ಕಾಲ ಕಳೇತ್ತಿದ್ದೊ. ಆಗ ಬೇಸಾಯದ ಒಟ್ಟಿಗೆ ದನಗಳ ಸಾಂಕುದು ಎಲ್ಲವುಕೆ ಇತ್ತ್. ಮನೆಗಳಿಗೆ ಸೆಗಣಿ ಸಾರ್ಸಿಕೆ, ಗದ್ದೆಗೆ ಬೇಕಾದ ಗೊಬ್ಬರಕೆ, ಹಾಲು

ಮಜ್ಜಿಗೇಲೇ ದಿನ ಕಳೇತ್ತಿದ್ದೊ. ಎಲ್ಲ ಬುಟ್ಟ್ ಚೊಂಬು ಪಾತ್ರೆ ಉಜ್ಜಿಕೆ ಕೂಡಾ ಮೊಜ್ಜಿಗೆನಾ, ಮೊಸರ್‌ನಾ ಉಪಯೋಗಿಸ್ತಿದ್ದೋ. ಒಂದೊಂದು ಮನೇಲಿ ಕಡಿಮೆ ತೇಳ್ರು 25 ರಿಂದ 100 ನಡೆ ದನಗ ಇದ್ದದೂ ಉಟ್ಟು. (ಅವಿಭಕ್ತ ಕುಟುಂಬಲಿ) ಗದ್ದೆ ಕೆಲ್ಸ ಮುಗ್ಸಿ ಆಮೇಲೆ ಎತ್ತುಗಳ, ದನಗಳ ಬುಟ್ಟ್ ಕಾಡಿಗೆ ಹೊಡ್ಕಂಡ್, ಅದರೊಟ್ಟಿಗೆ ಕೈಲಿ ಕತ್ತಿನೋ, ಬೆಡಿನೋ ಹಿಡ್ಕೊಂಡು ಹೋದು ಅವರ ಕ್ರಮ. ಹೀಂಗೆ ಯಾಗೋಳ್ನಾಂಗೆ ಹೂಡೆತ್ತ್‌ಬುಟ್ಟ್ ಶೇಷಣ್ಣ, ಸುಬ್ಬಣ್ಣ ಮತ್ತೆ ಬೊಳಿಯಣ್ಣ ಮೂರು ಜನ ಒಂದೇ ಕುಟುಂಬದೊವು ದನಗಳ ಹೊಡ್ಕೊಂಡ ಕಾಡಿಗೆ ಹೊರ್‍ಟೊ. ಎತ್ತ್‌ಗಳ ಮೈ ತೊಳ್ಸಿ, ಗದ್ದೆ ಕರೆಲಿ ಬುಟ್ಟ್ ಮಕ್ಕಳೊಟ್ಟಿಗೆ ನೋಡಿಕಾಂಕೆ ಹೇಳಿ, ಬೇಗ ಬೇಗ ಗಂಜಿಗೆ ಸಣ್ಣ ಮೆಣ್ಸ್ ಚಿರ್ಕಿಂಬಿ, ಮಜ್ಜಿಗೆ ಹಾಕಿ ಉಂಡ್ ಮಕ್ಕಳೊಟ್ಟಿಗೆ ಜಾಗ್ರತೆ ಹೇಳಿ ಇವು ಕಾಡಿಗೆ ಹೊರ್‍ಟೊ.

ಕಾಡಿಗೆ ಹೊರ್‍ಡುದು ತೇಳಿರೆ ಈಗನಾಂಗೆ ಪ್ಯಾಂಟ್, ಚಡ್ಡಿ, ಕಂಬಾಯಿ ಅಂತೆಲ್ಲಾ ಇತ್ಲೆ. ಸೊಂಟಕ್ಕೆ ಒಂದು ಬೈರಾಸ್, ತಲೆಗೊಂದು ಮೊಡ್ಪಾಳೆ, ಅದರ ಮೇಲೆ ಮುಂಡಾಸ್. ಕೈಯಲಿ ಕರಿಯ ಮರದ ಕೋಲು ಇನ್ನೊಂದು ಕೈಲಿ ಕತ್ತಿ. ಇವಿಷ್ಟೆ ಅವರ ಸಾಮಾನ್‌ಗ. ಒಟ್ಟಿಗೆ ಎಲೆಡಿಕೆ ಚೆಂಚಿ ಇರ್‍ತಿತ್. ಆ ಚೆಂಚಿಲಿ ಕೊಂಬು ಹಿಡಿನ ಬೀಸ್ಕತ್ತಿ ಮಾತ್ರ ಮರೇತ್ತಿತ್ಲೆ. ಇದರ್ಲಿ ಶೇಷಣ್ಣ ಮತ್ತೆ ಬೊಳಿಯ ಇಬ್ಬೊರು ಅಣ್ಣ ತಮ್ಮಂದರ್. ಅಂದ್ರೆ, ಒಂದೇ ಅಯ್ಯೆ ಅಪ್ಪನ ಮಕ್ಕ. ಸುಬ್ಬಣ್ಣ ಮಾತ್ರ ಬೇರೆ. ಕಾಡಿಗೆ ದನ ಹೊಡ್ಕೊಂಡ್ ಹೋಗಿ ಕಲ್ಲ್ ಕಡ್ದ ಪಣೆ ದಾಟಿ, ಮೊರ್‍ಪೆ ಗುಂಡಿಗಾಗಿ ಸರಳಿ ಹೊಂಡಕ್ಕೆ ಇಳ್ದೊ. ಅಲ್ಲಿಂದ ದನಗ ಮೇದ್‌ಕಂಡ್ ಹೋಂದಾಂಗೆ ಇವು ಹೂಡುಕೋಲು ಕೀಸಿಕೊಂಡು ಹೋಗ್ತಾ ಇದ್ದೊ. (ಹೂಡುಕೋಲು ತೇಳಿರೆ ಕಾಡ್‌ಲಿ ಸೊರ್ತದ ಕರಿಯ ಮರದ ದೈಗಳ ಕಡ್ದ್ ಕೀಸಿರೆ ದನಗಳಿಗೆ ಹೊಡೆಕೆ ಲಾಯ್ಕಾದೆ). ಆದರೆ ಶೇಷಣ್ಣ ಮಾತ್ರ ಬಿಲ್ಲ್ ಕಲ್ಲಿಲ್ ಎರಡು ಮಂಡೆ ಮುಕ್ರ ಹಕ್ಕಿ, ಒಂದು ಕಾಚುಕುಳ್ಳ ಹಕ್ಕಿನ ಹೊಡ್ದ್, ಒಟ್ಟಿಗೆ ಚೊಲ್ಲಿಕಂಡ್ ಸೊಂಟಲಿ ಸೆಕ್ಕಿಸಿತ್. ಇದರ್ಲಿ ಶೇಷಣ್ಣ ಬಾರಿ ಚುರ್‍ಕ. ಜೀವಲಿ ಸಣ್ಣಂವ ಆದ್ರೆ ಬಾರಿ ಕುಶಾಲ್, ಕಥೆ ಹೇಳ್ದು, ಕುಶಾಲ್ ಮಾತಾಡ್ದರ್ಲಿ ಬಾರಿ ಉಷಾರ್. ಒಮ್ಮೆ ಮರಂದ ಬಿದ್ದದರ್ಲಿ ಅಂವ ಮಾತ್ರ ಬದ್ಕಿದೇ ದೊಡ್ಡದು. ಮಧ್ಯಾಹ್ನ ಮನೇಲಿ ಸಮಾ ಮೀನ್ ಕಿಚ್ಚಿ ಹಾಕಿ ಉಂಡು, ಸೊಂತೆ ಕಾಯಿ ಹಲಸಿನಕ್ಕಿ ಗೈಪು, ಆಮೇಲೆ ಕೀಜಿನ ಗ್ಲಾಸ್‌ಲಿ 2 ಗ್ಲಾಸ್, ಮಜ್ಜಿಗೆ ಕುಡ್ದ್ ಕಾಡಿಗೆ ಹೋಗಿ, ಹುಳಿ ಕೊಯ್ಯಕಾಕನ ಗೆಲ್ಲ್ ಮುರ್‍ದ್ ಬಿದ್ದದ್. ಹಾಂಗೆ

ಬಿದ್ದದರ್ಲಿ ಅಂವನೇ ಹೇಳ್ದಾಂಗೆ, ಮೂರು ಕಡೆ ಹಂಞ ಗಂಜಿ, ಹಂಞ ಗೈಪು ಹೀಂಗೆ ಎಡೆ ಇಕ್ಕಿದಾಂಗೆ ಬಾಯಿಂದ ಬಿದ್ದಿತ್ತ್‌ಂತ ಹೇಳಿ ನಗಾಡ್ತಿತ್. ಆಗ ಬೀಳ್‌ಕನ ಅಂವನ ಬೆನ್ನ್ ಒಂದು ಕಡೆ ಹೊರ್ಪ್ ಹೋದಾಂಗೆ ಆಗಿ, ಅಂವ ಸಾಯಕನ ಮುಟ್ಟ ಹಾಂಗೆ ಇತ್ತ್. ಬೆನ್ನ ಎನ್ ಸಣಪ ಹಾಂಗೆಂತ ಕೇಳಿರೆ, ಈ ಮರಂದ ಬಿದ್ದ ಕಥೆನಾ ಹೇಳ್ತಾ ಇದ್ದೊ.

ಓ ನಾ ಹಳೇ ಕಥೇನಾ ಹೇಳ್ತಾ ಇದ್ದೆ. ಇವು ಹಾಂಗೆ ಹೋದೋವು ಅನೆ ಪಳ್ಳಾಕ್ಕಾಗಿ ಮುಂದೆ ಮಿಣ್‌ಪುಳಿ ಪಾರೆ ಕಡೆಗೆ ಹೋದೊ. ಅಲ್ಲಿ ಲ್ಯಾಕ್ ಹುಲ್ಲು ಸೊಪ್ಪು ಇದ್ದದ್‌ರಿಂದ ದನಗ ಸುಮ್ಮನೆ ಮೇಯಕೆ ಶುರು ಮಾಡ್ದೊ. ಹೀಂಗೆ ನೋಡಿಕ್ಯಾಕನ ಬೆದ್‌ರ್ ಹಿಂಡ್ಲ್‌ಗೆ ಒಂದು ದೊಡ್ಡಾ ಚೆಂಡೆ ಬಲ್ಲೆ ಹಬ್ಬಿದ್ ಕಂಡತ್. ಅದರ ನೊಡುಲಿ ಒಂದು ಒಣಗಿಲ್ ಶಿಲ್ವೆ ಮರ ಇತ್ತ್. ಅದರಲಿ ಒಂದು ಒಟ್ಟೆ ಕಾಂಬೋತ್ತಿತ್ತ್. ಶೇಷಣ್ಣ ಒಂದು ಕಲ್ಲ್ ತೆಗ್ದ್ ಆ ಮರಕೆ ಹೊಡ್ತ್. ಒಟ್ಟೆ ಒಳಗೆ ಪಾಂಜ ಇದ್ದರೆ ಹೊರಗೆ ಬರ್ಲಿಂತ. ಶೇಷಣ್ಣನ ಲೆಕ್ಕಚಾರ ಸರಿ ಆಗುಟು. ಒಂದು ಬಾವುಲಿ ಪಾಂಜ ತಲೆ ಹೊರಗೆ ತಂದ್ ಹಾಂಗೆ ಒಳಗೆ ಹುಕ್ಕತ್ತ್. ಇದರ ನೋಡ್ದ ಮೇಲೆ ಶೇಷಣ್ಣಂಗೆ ಸುಮ್ಮನೆ ಇರಿಕೆ ಆತ್‌ಲೆ. ಶೇಷಣ್ಣ ಅರಿಕೆ ಬೊಳ್ಳಿನ ಉರುಳು ಮಾಡಿ, ಪಾಂಜನ ತಲೆಗೆ ಹಾಕಿಕೆ ಟ್ರೈ ಮಾಡ್ತ್. ಅದ್ ಕಚ್ಚಿ ತುಂಡು ಮಾಡ್ತಿತ್. ಇನ್ ಇದರ ಬೆಡಿ ತಂದೇ ಹೊಡ್ಯೇಕುಂತೇಳಿ ಒಂದು ಉಪಾಯ ಮಾಡ್ದೊ. ಏನ್‌ಂತೆಳಿರೆ, ಶೇಷಣ್ಣ ಕೈಲಿದ್ದ ಕತ್ತೀಲಿ ಚೆಂಡೆ ಬಲ್ಲೆನ ಹೋಕೆ ತಕ್ಕ ಬುಡ್ಸಿ ಮೆಲ್ಲ ಒಳಗೆ ಹುಕ್ಕತ್ತ್. ಅರಿಕೆ ಬೊಳ್ಳಿ ಕಡ್ದ್, ಒಂದು ದಳೆ ಮಾಡಿ ಶೇಷಣ್ಣ ಮರಕ್ಕೆ ಹತ್ತಿತ್. ಮೇಲೆ ಇರುವ ಒಟ್ಟೆ ಹಕ್ಕಲೆ ನಿತ್ತ್, ಕತ್ತಿಲಿ ಮರಕ್ಕೆ ಒಮ್ಮೆ ತಟ್ಟಿತ್. ಪಾಂಜ ಹಾಂಗೆ ತಲೆ ಹೊರಗೆ ಹಾಕಿ ಹಿಂದಕ್ಕೆ ಒಳಗೆ ಹುಕ್ಕತ್. ಶೇಷಣ್ಣ ತಲೆಗೆ ಕಟ್ಟಿಕಂಡಿದ್ದ ಮುಂಡಾಸ್‌ನ ಒಟ್ಟೆಗೆ ಅಡ್ಡ ಹಾಕಿದೊ. ಪಾಂಜ ಕೂಡ್ಲೆ ಅದರ ಎಳ್ದ್ ಕೆಳಗೆ ಕುಂಡೆ ಅಡಿಗೆ ಹಾಕಿತ್. ಎಲಾ, ಇನ್ ಎಂತ ಮಾಡ್ದು? ಚೆಂಡೆ ಬಲ್ಲೇಲಿ ಸೊಪ್ಪು ಎಂತ ಇಲ್ಲೆಂತಳ್ಳಿ ಸೊಂಟಲಿ ಸುತ್ತಿಕೊಂಡಿದ್ದ ತೋರ್ತುನನೇ ಬಿಚ್ಚಿ ಹಿಂದಕೆ ಒಟ್ಟೆಗೆ ಅಡ್ಡಿದೊ. ಟೈಟ್ ಅಡ್ಡಿದ್ ಇನ್ನೇನು ಇಳಿಯೋಕ್ ತೆಳಿಕನ ಇವು ಇದ್ದ ಜಾಗಂದ ಹಞ ಕೆಳಗೆಂದ 'ಲಟೋ'ಂತ ದೊಡ್ಡ ಶಬ್ದ್ ಕೇಳ್ತ್. ಅಷ್ಟೊತ್ತಿಗೆ ಕೆಳಗೆ ನಿಂತಿದ್ದ ಬೊಳಿಯಣ್ಣ ಸುಬ್ಬಣ್ಣನ ಪೈಕಿ, ಮೊದಲೇ ಪುಕ್ಕಲ ಸುಬ್ಬಣ್ಣ.. ಶೇಷಣ್ಣಾ ಆನೆ.. ಆನೆ.. ಬಾತ್ ಅಂತ ಹೇಳಿ ಓಡಿಕೆ ಶುರು ಮಾಡ್ದೊ. ಅಷ್ಟೊತ್ತಿಗೆ ಅಲ್ಲಿ ಇದ್ದ

ಶೇಷಣ್ಣನ ಕೈ ಮರಂದ ಬುಟ್ಟ್ ಹೋತ್. ಇವಿಬ್ರೂರು ದೂರಲಿ ತಿರ್‍ಗಿ ನೋಡಿಕ್ಯಾಕನ ಚೆಂಡೆ ಬಲ್ಲೆ ಒಮ್ಮೆ ಮಸಿಗಿದಾಂಗೆ ಕಂಡತ್.. ನಿಲ್ಲಿಕೆ ಧೈರ್ಯ ಇಲ್ಲೆ.. ಓಯಿ... ಶೇಷಣ್ಣ ಮರಂದ ಬೀತ್ ಕಂಡದೆಂತ ಹೇಳಿಕೊಂಡೊ. ಆದರೂ ಉಸಿರು ಕಟ್ಟಿ ಓಡ್ದೋ. ಇನ್ನೇನು ಮನೆಗೆ ಇನ್ನ್ ಹಂಞ ದೂರ ಹೆಬ್ಬುಲಿ ಕೊಚ್ಚಿಲಿ, ಇವಿಬ್ರೂರ್ ಓಡುತ್ತಾ ಇದ್ದೊ. ಆದರೆ ಇವರ್‌ಂದ ಮುಂದೆ ಅದ್ ಹೇಂಗೆ ಗೊತ್ತ್‌ಲೆ. ಶೇಷಣ್ಣ ಬರೀ ಕೋಮಣಲಿ ಓಡ್ತಾ ಉಟ್ಟು. ಮನೆ ಹಕ್ಕಲೆ ಮೂರು ಜನ ನಿತ್ತೊ. ಉಸಿರ್ ತೆಗೀಕೆ ಆದುಲೆ. ಆದರೆ ಶೇಷಣ್ಣ ಮಾತ್ರ ನೆಗಾಡಿಕೊಂಡು ನನ್ನ ಕುಂಡೇಲಿ ಒಂದು ಇಪ್ಪತ್ತೈದು ಚೆಂಡೆ ಮುಳ್ಳು ಹೆಟ್ಟಿಟ್ಟು. ಒಮ್ಮೆ ತೆಗಿನಿ ಮಾರಾಯ್ರೆ ಅಂತ ಹೇಳ್ತಾ ಉಟ್ಟು. ಮರಂದ ಬಿದ್ದದಾದ್ರೂ ಶೇಷಣ್ಣ ಮಾತ್ರ ಇವರ್‌ಂದ ಮುಂದೆ ಓಡ್ಯೋಳೊತಾದ್ರೆ ಅವರ ಚುರುಕು ಅದೆಷ್ಟ್‌ಂತ ನಾವು ಲೆಕ್ಕಾಚಾರ ಹಾಕೋಕು.

* * * * *



# ದೊಡ್ಡ ಉಗ್ಗಪ್ಪಂಗೆ ಕುಡೋಳ್ ಕಚ್ಚಿದ್ (ಸತ್ಯ ಕಥೆ)

ಹಿಂದೆನ ಕಾಲಲಿ ಬೇಸಾಯ ಬುಟ್ರೆ ತೋಟ ಎಲ್ಲ ಕಡಿಮೆ. ಗದ್ದೆ ಬೇಸಾಯ ಎಷ್ಟಿತ್ ಅಷ್ಟ್ ಮಾತ್ರ ಬೇಲಿ ಹಾಂಕಡ್, ಬೀಜದ ಕೊಚ್ಚಿ, ಸೊಪ್ಪುನ ಕೊಚ್ಚಿ ಎಲ್ಲಾ ಹಾಂಗೇ ಇರ್ತಿತ್ತ್. ಆಗ ಗದ್ದೆ ಬೇಸಾಯಕ್ಕೆ ದನಗ ಹೋಗುವ ದಾರಿಗೆ ಬೆದ್‌ರ್ ತಟ್ಟೆನ ಬೇಲಿ ಮಾಡ್ತಿದ್ದೊ. 4 ಪೀಟಿಗೊಂದು ಬುಡಕಾಲ್ ಬೆದ್‌ರ್‌ನ ಒಡ್ದ್ ಚೂನ ಮಾಡಿ ಉದ್ದಕ್ಕೆ ಊರಿಕಂಡ್ ಹೋತ್ತಿದ್ದೊ. ಬೆದ್‌ರ್ ಚೂನಕ್ಕೆ ಮರದ ಗಟ್ಟಿ ಮಾಡಿ ಮೇಲೆಂದ ಹೊಡೆತ್ತಿದ್ದೊ. ಅದ್ ಗಟ್ಟಿ ಆದ ಮೇಲೆ; ಬೆದ್‌ರ್ ತಟ್ಟೆನ ಸರಿಯಾಗಿ ಮುಡೇತಿದ್ದೊ. ಹೊಸ ಬೇಲಿ ಆದ ಮೇಲೆ ದೂರಂದ ನೋಡಿಕೆ ಬಾರಿ ಲಾಯಿಕ್. ಹೊರಗೆ ಹೋಕೆ ಅಲ್ಲಲ್ಲಿ ಉರ್‌ಗಿಲ್ ಇಸ್‌ತ್ತಿದ್ದೊ. ಹಾಂಗೆ ಮನುಷ್ಯಂಗೆ ಹೋಕೆ ತಡಮೆ ಹಾಕ್‌ತ್ತಿದ್ದೊ.

ಹೂಡಿ ಎತ್ತ್‌ಬುಟ್ಟ ಮೇಲೆ ದನಗಳ ಕಾಡಿಗೆ ಹೊಡ್ಯೋದು ಮಾಮೂಲು. ಕಾಡಿಗೆ ಹೋಕ್ಯಾಕನ ಆ ಬಯ್ಲುನ ಅಜ್ಜಂದರ್, ಮಕ್ಕ ಎಲ್ಲಾ ಒಟ್ಟಿಗೆ ಹೋಗ್ತಾ ಇದ್ದೊ. ಅಂದ್ ಕೂಡಾ ನನ್ನ ಅಪ್ಪ ಸುಬ್ಬಣ್ಣ, ಶೇಷಣಪ್ಪ, ಬೊಳಿಯ ಸಣಪ ಮತ್ತೆ ಬಾಬು ಸಣಪ ಇವು ಸ್ವಲ್ಪ ಸಣ್ಣವು, ರಾಮಣ್ಣ ಸಣಪ, ಮಾಧವ ಸಣಪ ಎಲ್ಲಾ ಒಟ್ಟಿಗೆ ದನ ಹೊಡ್ಕೊಂಡು ಹೊರ್‌ಟೊ. ಇವೆಲ್ಲ ಆಗ

ಸಣ್ಣವು. ಇವರ ಮುಂದೆ ದೊಡ್ಡವುತೇಳಿರೆ ದೊಡ್ಡ ಉಗ್ಗಪ್ಪ. ಅವು ತಲೆಗೆ ಮೊಡ್ಪಳೆ ಇಸಿ, ಸೊಂಟಕ್ಕೆ ಚುಡೊಂಕು ಕಟ್ಟಿ, ಏರ್ ಸ್ವರಲಿ ದನಿಕೊಟ್ಟುಕಂಡ್ ಹೋಗ್ತಾ ಇದ್ದೊ. ಓ.ಓ.ಓ.ಓ.ಕೆಂದಾ ಓ.ಓ.ಓ. ಗುರುವಣ ಅದ.... ಅದ.. ಅತ್ತ ಎಲ್ಲಿಗೆ ತಿರ್ಗುದು ಅದ್, ಎತ್ತಿಗೆ ಸೊಯೆ ಇಲ್ಲೆ ಕಂಡದೆ ಏ ಮಕ್ಕಳೆ ಅದರ ತಲೆಗಡ್ಡ ಹೋಗಿ ತಿರ್ಗ್ಗಸಿ ಅಂತ ಮಕ್ಕಳಿಗೆ ಬೊಯ್ದು ಎತ್ತುಗಳ ಹಾಂಗೆ ದಾರಿಗೆ ‘ತಂದು ಹೊಡ್ಕೊಂಡು ಹೋಗ್ತಾ ಇದ್ದೊ.

ಮುಂದೆ ಹೋಕನ ದೊಡ್ಡ ಕುರ್ಕಿಲ್ ಮತ್ತೆ ಅಟ್ಟೆ ಮುಟ್ಟೆಗನ ಕಾಡ್. ನೆಟ್ಟಂಗೆ ಹೋಕೆ ಬೊತ್ತ್. ದೊಡ್ಡ ಬಲ್ಲೆಗಳ್ಳಿ ದನಗ ಮಾತ್ರ ಸಲಿಸಾಗಿ ಹೋಕೆ ಆತಿತ್ತ್. ದನಗ ಮುಂದೆ ಹುಕ್ಕೊಂಡು ಹೋದು ಅವರ ಹಿಂದೆಂದ ದೊಡ್ಡ ಉಗ್ಗಪ್ಪ ದನಗಳ ಓಡ್ಸಿಕಂಡ್ ಬಲ್ಲೆ ಒಳಗೆ ಹುಕ್ಕೊ. ಮಕ್ಕ ಎಲ್ಲಾ ಉಗ್ಗಪ್ಪನ ಹಿಂದೆಂದ. ದೊಡ್ಡ ಉಗ್ಗಪ್ಪ ಮಕ್ಕಳೊಟ್ಟಿಗೆ ಮೊರ್ಲು ಮಾಡ್ದು ಜಾಸ್ತಿ. ಉಗ್ಗಪ್ಪ ಬಲ್ಲೆ ಬೊಗ್ಗಿ ಹುಗಿಕಾಕನ ತೋರ್ಸ್ತನ ಸೈಡ್‌ಗೆ ಸರ್ಸಿ, ಮಕ್ಕಳಿಗೆ ಹಿಂದೆಂದ ಕುಂಡೆ ತೋರ್ಸಿಕಂಡ್, ಬೊಗ್ಗಿ ಹುಗುವ ಮಕ್ಕ ಕಣ್ ಬುಟ್ ನೋಡಲಿಂತ ಬೇಡಾದ್ ಮಾಡಿಕಂಡ್, ದನಿ ಕೊಟ್ಟ್‌ಕಂಡ್ ಹೋಗ್ತಾ ಇದ್ದೊ. ದಾರಿ ಹೋ... ಮಗಾ ಬಾ... ಬಾ... ಹೊಟ್ಟೆ ತುಂಬಾ ಮೇದ್ ಮತ್ತೆ ಬೇಗ ಮನೆಗೆ ಹೋಕು ಬಾ.ಬಾ. ಮೈಕಣಾಂತ ಹೇಳಿ, ಅಯ್ಯೋ ಅಯ್ಯಯ್ಯೋಂತಾ ಬೊಬ್ಬೆ ಹೊಡ್ದ್, ಉಗ್ಗಪ್ಪಾ ತಿರ್ಗಿ ಇತ್ತಳೆ ಓಡಿ ಬಂದೋ. ದನಂಗಳೂ ಬಾಲ ಕುತ್ತ ಮಾಡಿ ಓಡ್ದೋ. ಉಗ್ಗಪ್ಪಂಗೆ ಏನಾಂತ್ಂತ ಮಕ್ಕಳು ಹೆದ್ರಿ ತಿರ್ಗಿ ಓಡಿಕೆ ಸುರುಮಾಡ್ದೊ. ಮಕ್ಕ ಆದಾರ್‌ಂದ ಬೇಗ ಓಡಿ ಗುಡ್ಡೇಲಿ ಹತ್ತಿ ನಿತ್ತ್ ನೋಡಿರೆ, ಉಗ್ಗಪ್ಪ ನಿತ್ತಲೇ ಕುಣಿತಾ ಒಳೋ. ಕಥಕ್ಕಳಿ ಮಾಡ್ದಾಂಗೆ ಕೈಯಿನ ಎಲ್ಲಾ ತಿರ್‌ಗಿಸ್ತಾ ಒಳೋ. ಆಗ ನಾವುಗೆ ಅಂದಾಜಾತ್ ಉಗ್ಗಪ್ಪ ಎಲ್ಲೊ ಕಡ್‌ಂದ್‌ಳ್ ಗೂಡಿಗೆ ಹಾದೊಳಾಂತ. ನೆಗೆ ತಡೆಕಾಗದೆ ಬಾಯಿಗೆ ಕೈ ಅಡ್ಡ ಹಿಡ್‌ಕಂಡ್ ಬೊಗ್ಗಿ ಬೊಗ್ಗಿ ಬಿದ್ದ್ ಬಿದ್ದ್ ನೆಗಾಡ್ದೊ. ಉಗ್ಗಪ್ಪಂಗೆ ಕಂಡರೆ ನಮ್ಮ ಕೊಲ್ಲುವಾಂತ ಹೆದರಿಕೆನೂ ಆಗ್ತಾ ಇತ್ತ್. ಹಞ ಹೊತ್ತಿಗೆ ಉಗ್ಗಪ್ಪ ಏದುಸಿರು ಬುಟ್ಟ್ ಹಾಂಗೆ ಒಂದು ಕಲ್ಲ್ ಮೇಲೆ ಕುದ್ದೊ. ಮಕ್ಕ ದೂರಂದಳೇ ನೋಡ್ತಾ ಒಳೊ.

ಉಗ್ಗಪ್ಪ ಕೋಪಲಿ ಏ ಮಕ್ಕಳೇ ಎಲ್ಲಿ ಒಳೋರಿ? ಬನ್ನಿ. ಈ ಅಜ್ಜಂಗೆ ಕಂಡ್‌ದೊಳ್ ಕಚ್ಚಿ ಕೊಂದರೂ ನೀವು ಬಾದುಲೆ. ನಿಮ್ಮ ನಂಬಕ್. ಬನ್ನಿನೇನೆ ಗುಂಡಿಕಡ್ದ್‌ವು. ನನ್ನ ಮೊರೆಲೆಲ್ಲಾ ಕಂಡ್‌ದೊಳು ಮುಳ್ಳು ಉಟ್ಟು. ತೆಗೆನೀಂತ ಬೊಯ್ದೊ. ಮಕ್ಕ ಮೋರೆ ಮೋರೆ ನೋಡಿಕಂಡ್ ಪೊಯಿಂತಾ ಕಣ್ಣಲೇ ಸನ್ನೆ ಮಾಡಿ ಒಟ್ಟಿಗೆ ಉಗ್ಗಪ್ಪನ ಹಕ್ಕಲೆ ಓಡ್ದೊ. ಹಕ್ಕಲೆ ಹೋಗಿ ನೋಡಿರೆ, ಉಗ್ಗಪ್ಪನ

ಮುಸುಂಡು ಹನುಮಂತನಾಂಗೆ ಕಂಡದೆ. ತುಟಿ, ಕಣ್ಣ್, ಮೂಂಕು, ಎಲ್ಲಿಂತ ನೋಡ್ತ್‌ಲೆ. ಕಡ್‌ಂದೊಳ್ ಕಚ್ಚಿದರ್ಲಿ ಅಲ್ಲಲ್ಲಿ ದೊಡ್ಡ ದೊಡ್ಡ ಕೊಟ್ಟಗ ಬಂದುಟು. ಬರೀ ಮೋರೆ ಮಾತ್ರ ಅಲ್ಲ. ಕೈಗೆ, ಎದೆಗೆ, ಕಾಲ್‌ಗೆ, ಕುಂಡೆಗೆ ಪೂರ ಕಚ್ಯೊಳೊ. ನೋಡಿ ಮಕ್ಕಳೇ ಎಲ್ಲೆಲ್ಲಿ ಕಚ್ಯೊಳೋಂತ. ಎಲ್ಯಾರ್ 48 ಕಡೆ ಕಚ್ಚಿರೆ ನಾ ಕೊಟ್ಟೆ ಕಟ್ಟುವೇಂತ ಅಜ್ಜ ಹೇಳ್ದೊ. ಪಾಪ ಬೇನೆ ತಡ್ಯಾಕಾಗದೆ ಉಗ್ಗಪ್ಪ ಸಣ್ಣದರ್ಲಿ ದೆರ್ಪುತ ಒಳೊ. ಕುಡಿಯಕೇನಾರ್ ಬೇಕಾಂತ ಅಜ್ಜನೊಟ್ಟಿಗೆ ನಾವು ಕೇಳ್ದೊ. ಕುಡಿಯಕೆ ನಿಮ್ಮ ಅಪ್ಪನ ಮನೆಂದ ಇಲ್ಲಿ ಎಂಥ ಉಟ್ಟು? ಚೋಡಿಕರೆಗೆ ಹೋಕರೆ ಇನ್ನೂ ಅರ್ಧಪರ್ಲಾಂಗ್ ಹೋಕುಂತ ಬೇನೆನ ಸಿಟ್ಟ್‌ಲಿ ಮಕ್ಕಳಿಗೆ ಬೊಯ್ದೊ. ಮಕ್ಕ ಸುಮ್ಮನಾಕೊಂಡೊ. ಹಂಞ ಹೊತ್ತಿಗೆ ನೋಡ್ರೆ ಮುಂದೆ ಹೋತಿದ್ದ ದನಗ ಹಿಂದಕ್ಕೆ ಬಾಲ ಕುತ್ತ ಮಾಡಿ ಚುಳ್ಳಿಕಂಡ್ ಮನೆಕಡೆ ಓಡ್ದೊ. ಹೋ.. ಹೋ...ಹೋ.... ಕುಡೋಳುಗ ದನಗಳಿಗೂ ಸರಿ ಕಚ್ಚಿರೋಕುತ್ತ ಕಂಡದೆ. ಅಜ್ಜ ಹೇಳಿಕಂಡೊ.

ಉಗ್ಗಪ್ಪ್ ಹೀಂಗೆ ಒಮ್ಮೆ ಮೋರೆ ಒರ್‍ಸಿಕಮೋಂತ ನೋಡಿರೆ, ಅಜ್ಜನ ಬೈರಾಸ್ ಕಾಂಬೋದುಲೆ. ಆಗ ನೆಂಪಾತ್. ನಾ ಬೈರಾಸ್‌ನ ಮೊಡ್ಪಳೆ ಮೇಲೆ ತಲೆಗೆ ಕಟ್ಟಿಕಂಡ್ ಇದ್ದೇಂತ. ಈ ಕೂಡೋಳೂ ಕಚ್ಚುವ ಬರಲಿ ಮೊಡ್ಪಳೆ ಮತ್ತೆ ಬೈರಾಸ್ ಅಲ್ಲೇ ಬಿದ್ದಿರೋಕು. ಅಜ್ಜ ಮಕ್ಕಳ ಕರ್ದ್ ಹೇಳುವೆ, ಹೋಗಿನೇ ಮಕ್ಕಳೇ ಒಮ್ಮೆ ಆ ಬೈರಾಸ್‌ನು, ಮೊಡ್ಪಳೆನೂ ಹೆರ್‍ಕಿಣ್ ಬನ್ನಿ. ಅದ್ ಕೂಡೋಳು ಗೂಡು ಹಕ್ಕಲೆ ಬಿದ್ದುಟ್ಟೂಂತ. ಮಕ್ಕ ನಂದಾಕ್ಕಿಲೆ, ನಂದಾಕ್ಕಿಲೆಂತ ದೂರ ಓಡ್ದೋ. ನಿಮ್ಮಂದ ಏನಾರ್ ಕೈಂದ ಮಾಡಿಕೆ ಆದೇನಾ, ಬೇಡ ಬುಡಿ. ನಾನೇ ತನ್ನೇಂತ ಮೆಲ್ಲ ಅಜ್ಜ ಕುದ್ದಲಿಂದ ಎದ್ದೊ. ಕೂಡೋಳು ಗೂಡಕ್ಕಲೆ ಹೋದರೆ ಈಗೋಳು ಅವು ಮೊಡ್ಪಳೆಗೆ ಕುಟ್ಟುತ್ತಾ ಒಳೊ. ಅಯ್ಯನಬಂಡೆ ಎಂಥ ಮಾಡ್ದುಂತ ಯೋಚನೆ ಮಾಡಿ, ಅಜ್ಜ ಒಂದು ದೊಡ್ಡ ಕರಿಯ ಕೋಲುನ ಕಡ್ದೊ. ಅದರ ಗಳೇನಾಂಗೆ ಮಾಡಿ ಅದ್ಕೆ ಒಂದು ಕೊಕ್ಕೆನ ಕಟ್ಟಿದೊ. ದೂರಲ್ಲಿ ಮೆಲ್ಲ ಅಜ್ಜ ಹರ್‍ಕಂಡ್ ಬಲ್ಲೆ ಸೆರೇಲೆ ಹೋಗಿ ಆ ಗಳೇಲಿ ಮೊಡ್ಪಳೆನೂ, ಬೈರಾಸ್‌ನು ತೆಗೆಕೆ ನೋಡ್ದೊ. ಬಲ್ಲೆ ಒಳಗೆ ಹರ್‍ಕಂಡ್ ಹೋಕನ ದೂರಂದ ನೋಡುವ ಮಕ್ಕಳಿಗೆ ಅಜ್ಜನ ಕುಂಡೆ ಮಾತ್ರ ಕಂಡದ್ದೆ. ಅದ್ ಹೇಂಗೆ ಕಂಡದೆ ತೇಳಿರೆ ಅಕ್ಕಿ ಮುಡಿ ಕಟ್ಟಿಕಾಕನ ಬೊಳ್ಳಾರ್ ಬೊಳ್ಳಿಲಿ ಕಾಸಿ ಕಟ್ಟಿದಾಂಗೆ ಕುಂಡೆ ಕಂಡದೆ. ಅಜ್ಜ ಏನೆಲ್ಲ ಮಾಡಿ, ಮೊಡ್ಪಳೆನೂ, ಬೈರಾಸನೂ ಮೆಲ್ಲ ಮೆಲ್ಲ ಎಳ್ಟ್ ತೆಗ್ದವೆ. ದನಗೆಲ್ಲ ಹರಿ ಬಿದ್ದ್ ಮನೆಕಡೆ ಹೋದಂರ್ದ, ಇವುನೂ ತಿರ್‍ಗಿ ಮನೆ ಕಡೆ ಹೊರ್‍ಟೊ. ಅಜ್ಜ ಮುಂದೆ, ಮಕ್ಕ ಹಿಂದೆಂದ. ಮೆಲ್ಲ ಅಜ್ಜಂಗೆ ಕೇಳದಾಂಗೆ ಮಕ್ಕ ಮಾತಾಡ್ವೆ, ಉಗ್ಗಪ್ಪ ಇಂದ್ ತೋರ ಕಂಡವೆ. ಉಗ್ಗವ್ವಂಗೂ ಖುಷಿ ಆದುಂತ.



# ಹುಲಿ ಅಜ್ಜ (ಸತ್ಯ ಕಥೆ)

ಸುಮಾರು ಮೂವತ್ತಾರು ವರ್ಷಗಳ ಹಿಂದೆನ ಕಥೆ. ನಾ ಧರ್ಮಸ್ಥಳ ಶಾಲೆಲಿ ಹೈಸ್ಕೂಲ್ ಕಲಿತಾ ಇದ್ದೆ. ರಜೆಲಿ ಮನೆಗೆ ಬಾಕನ ಅಪ್ಪ ಕತ್ತಲೆಗೆ ಕುದ್ದ್‌ಕಂಡ್ ನನ್ನೊಟ್ಟಿಗೆ ಹೇಳ್ದ ಸತ್ಯ ಕಥೆಗಳ್ಲಿ ಇದ್ ಒಂದ್. ಈ ಹಿಂದೆ ಬೇರೆ ಕಥೆಗಳಲ್ಲಿ ಹೇಳ್ದಾಂಗೆ ಗದ್ದೆ ಬೇಸಾಯ ಕುಮೇರಿ ಮಾಡಿಕೊಂಡ್ ಭತ್ತ, ರಾಗಿ, ನವಣೆ ಬೆಳ್ಸಿಕಂಡಿದ್ದ ಕಾಲ. ಕುಮೇರಿಲಿ ಅಲ್ಲಲ್ಲಿ ಚೂಟ್ ಮಣ್ಣ್ ಇದ್ದಲಿ ನೀರು ಸೋಂತೆಗಳ ಬಿತ್ತ್ ಹಾಕಿ ರಾಶಿ ರಾಶಿ ಬೆಳ್ಸಿಕಂಡ್ ಇದ್ದ ಕಾಲ.

ಈ ಹಿಂದೆ ಹೇಳ್ದಾಂಗೆ ಬೇಸಾಯ ಮುಗ್ಸಿದ ಮೇಲೆ ದೊಡ್ಡ ಕೆಲ್ಸ್ ಇಲ್ಲೆ. ಮತ್ತೆ ಬೆಡಿ ತಕಂಡ್ ನಾಯಿ ಕರ್ಕಂಡ್ ಬೇಟೆಗೆ ಹೋದು ಮಾಮೂಲು. ಹಾಂಗೆ ಒಮ್ಮೆ ಒಳ್ಳ ಬಯ್ಪು ಇದ್ದದಿನ ನಮ್ಮ ಕುಟುಂಬಲಿ ಕುಳ್ಳ ಆದರೂ ಒಳ್ಳೆ ಗಟ್ಟಿ ಮುಟ್ಟ್‌ನ ಶರೀರದ ಸೋಂಪ ಗೌಡ ಅವರ ಕೇಪುನ ಬೆಡಿನ ಲಾಯಿಕ್ ಸೀರೇಲಿ ಒರ್‍ಸಿ. ಒಳ್ಳೆ ಒಂದು ಹಂದಿ ಈಡ್‌ನ ನಾಲ್ಕು ಬೆರ್‌ಲ್ ಬರುವಾಂಗೆ ತುಂಬುಸಿ, ಕಾಡಿಗೆ ಹೊರ್‍ಟೊ. ಒಟ್ಟಿಗೆ ಅವರ ಮಂಞ ಬಾಬು, ಇನ್ನೊಬ್ಬ ಯಾಗೋಳು ಒಟ್ಟಿಗೆ ಇರುವ ಸಬ್ಬಣ್ಣಜ್ಜನ

ಮಂಞ ಬಾಬು. ಹೀಂಗೆ ಇಬ್ಬರ ಕರ್ಕಂಡ್ ಕಾಡಿಗೆ ಹೊರ್‍ಟೊ. ಅವರ ಮಂಞ ಬಾಬು ಒಂದು ದೊಡ್ಡ ಕಡ್‌ಪತ್ತಿನ ಹಿಡ್ಕೊಂಡೊ. ಅದರ ಬಾಯಿ ಏನೂ ಹರ್‍ತ ಇತ್ತ್‌ಲೆ. ಏನಾರ್ ತೆರೆಕೆ ಇದ್ದರೆ ಮಾತ್ರ ಅದರ ಮೊಸೆದು ವಾಡಿಕೆ. ಬೊಯಿರಿ ನಾಯಿ ಬೊಳ್ಳಿಗೆ ಕಟ್ಟಿ ಹಾಕಿಕೆ ಬಾತ್‌ಲೆ. ಎಲ್ಲಿಯೋ ತಿರ್‍ಗಿಕೆ ಹೋಗುಟ್ಟು. ಮನೇಲಿ ಇದ್ದ ಕೆಂಜು ನಾಯಿನ ಕರ್‍ಕಂಡ ಮೂರು ಜನ ಕಾಡಿಗೆ ಹೊರ್‍ಟೊ. ಸೋಂಪಣ್ಣ ಬೆಡಿ ಚೀಲ ಹೆಗ್‌ಲಿಗೆ ಹಾಕಂಡ್, ಚುಡೊಂಕು ಸೊಂಟಕೆ ಕಟ್ಟಿಕಾಂಡ್ ನೆಲ ಅದ್‌ರ್‌ವಾಂಗೆ ಗುಡ್ ಗುಡ್ ನಡ್ಕೊಂಡು ಹೊದ್ಮೊ. ಆಗನ ಕಾಲಲಿ ಕಾಲಿಗೆ ಜೋಡು ಹಾಕೋವು ಬಾರಿ ಕಮ್ಮಿ. ಸೋಂಪಣ್ಣಂಗೆ ಅಂತೂ ಚೋಡು ಹಾಕಿ ಅಭ್ಯಾಸನೇ ಇಲ್ಲೆ. ಸೋಂಪಣ್ಣ ಮುಂದೆಂದ ಎರಡು ಬಾಬುಗ ಹಿಂದೆಂದ. ಕೆಂಜು ನಾಯಿ ಇದಕ್ಕಿದ್ದಾಂಗೆ ಮುಂದೆ ಓಡ್ತ್. ಹಾಂಗೆ ಚೋಡಿ ದಾಟಿ ಗುಡ್ಡೆ ಹತ್ತಿಕೆ ಶುರು ಮಾಡ್ದೊ. ಚೂರು ಮುಂದೆ ಹೋಕಾನ ಸಣ್ಣ ಬೂರೂಗದ ಮರ ಸಿಕ್ಕಿತ್. ಮತ್ತೂ ಚೂರು ಹತ್ತಿಕಾಕನ ದೊಡ್ಡ ಬೂರೂಗದ ಮರ ಸಿಕ್ಕಿತ್. ಅಲ್ಲಿಗೆ ಹತ್ತಿಕಾಕನ ಉಸಿರ್ ಮೇಲೆ ಕೆಳಗೆ ಹೋಕೆ ಶುರು ಆತ್. ಮರದ ಬುಡಲಿ ದೊಡ್ಡ ದೊಡ್ಡ ಬೇರ್‌ಗಳ್‌ಂದ ಕೂಡಿ ಸಣ್ಣ ಸಣ್ಣ ಕೋಣೆಗಳಾಂಗೆ ಇದ್ದ ಜಾಗ ಇತ್ತ್ . ಹಂಞ ಹೊತ್ತು ಎಲ್ಲವೂ ಅಲ್ಲಿ ಕುದ್ದೊ.

ಈ ಎರಡ್ ಮರಗಳ ಬಗ್ಗೆ ಇಲ್ಲಿ ಚೂರು ಹೇಳಕಾದೆ. ಏಕೆಂತೇಳಿರೆ ಅಪ್ಪ ಹೇಳ್ತಾ ಇದ್ದೊ ಅವು ಸಣ್ಣವು ಇರಿಕಾಕನನೇ ಈ ಮರಗ ಹೀಂಗೆ ಒಳೊ. ಒಂದೊಂದು ಮರ ಸುಮಾರು ಅರ್ಧ ಎಕ್ರೆಲಿ ಹಬ್ಬಿಕಂಡ್ ಉಟ್ಟು. ಇದರ ಗೆಲ್ಲ್‌ಗಳಲ್ಲಿ ವರ್ಷೋರ್‌ಳು 40–50 ಜೇನು ಒಕ್ಕುಲುಗ ಕುದ್ರುವೋ. ಅಲ್ಲಿಗೆ ಯಾರೊಂದೊಳು ಹತ್ತಿಕೆ ಸಾಧ್ಯ ಇಲ್ಲೆ. ಒಂದೊಂದು ಮರನ ಸುಮಾರು 10–15 ಜನ ತಬ್ಬಿರೂ ಕೂಡಿ ಬಾಕಿಲೆ. ಇದರ ಬುಡೊಲಿ ಮಲೆ ದೆವ್ವಗ ವಾಸ ಇದ್ದೇವೆಂತ ಅಪ್ಪ ಹೇಳ್ತಾ ಇದ್ದೊ. ಎಲ್ಲೊವು ಇದರ ಪುರುಷರ ಬೂರುಗಾಂತ ಕೂಡಾ ಕರ್‍ದವೆ. ಇದರ ಕಡಿಯಕೆ ಮುಂದೆ ಮಾಪುಳೆಗಾ 2–3 ಸರ್ತಿ ಬಂದ್ ಅಟ್ಟೊಳಿಕೆ ಹಾಕಿ ಕಡಿಯಕೆ ರೆಡಿ ಮಾಡಿಕಾಕನ ಏನಾರ್ ಅನಾಹುತ ಆಗಿ ಅದರ ಬುಟ್ಟೇ ಹೋತಿದ್ದೊ. ಇಂದ್ ಕೂಡಾ ಆ ಎರಡ್ ಮರಗ ಹಾಂಗೆ ದೊಡ್ಡದಾಗಿ ಬೆಳ್ಕಂಡ್ ಒಳೊ. ಹಾಂಗಾಗಿ ಅಪ್ಪ ಹೇಳ್ದಾಂಗೆ ಅಲ್ಲಿ ದೈವದ ಸಾನಿಧ್ಯ ಉಟ್ಟೂಂತ ನಾವುಗೂ ಅನ್ಸಿದೆ. ನಾ ಸುಮಾರು ಸರ್ತಿ ಅದರ ಹಕ್ಕಲೆ ಹೋಗಳೆ. ಈಗಲೂ ಜೇನ್‌ಗ ಅದರ್‌ಲಿ ಕುದ್ಕಂಡ್ ಒಳೋ. ಅಲ್ಲಿಗೆ ಹೋಕ್ಯಾಕನ

ಒಂದು ಚೂರು ಹೆದ್ರಿಕೆ ಈಗಲೂ ಆದೆ. ಯಾರಿಗಾರ್ ನೋಡಿಕೆ ಆಸೆ ಇದ್ದರೆ ಬನ್ನಿ ನಾ ತೋರ್ಸಿನೆ. ಸದ್ಯ ಈ ವತಾರಲಿ ಅಷ್ಟ್ ದೊಡ್ಡ ಮರ ನೋಡ್ದ ನೆಂಪು ನಂಗೆ ಇಲ್ಲೆ.

ಸೋಂಪಣ್ಣ ಮಕ್ಕಳ್‌ಗೆ ಹೇಳ್ದೊ, ಎದ್ರಿ ಮಕ್ಕಳೆ ಹಾಂಗೆ ಪುಡೇಲಿ ಹೋಗಿ ಬರೋಮೊ. ನಾಯಿ ಎಂತೊದೊ ಮೂರಿ ಎಳ್ಕೊಂಡ್ ಬಂದುಂಟು, ಎಂತದೂ ದೊಡ್ಡದೇ ಆಗಿರೋಕು. ಒಮ್ಮೆ ಕುಂಯಿ ಗುಟ್ಟಿದೆ. ಬಾಲನು ಹಂಞ ಕಚ್ಚೆ ಕಟ್ಟಿಟ್ಟು. ಒಂದೇ ಆಗಿ ಹೆದ್ರಿಕೆ ಆಗಿರೋಕು. ಬೊಗ್ಗಿನ ಹುಲಿ ಹೊರಿಕೆ, ಎಲ್ಲಿಗೆ ಹೋಗುಟು ಗೊತ್ತಿಲೆ. ಸೋಣ ಶುರು ಆಕನ ಎಲ್ಲಿಯೋ ಹಡ್ಪೆ ತಿರ್ಗ್‌ಂಡ್ ಹೋಗುಟು. ಅದ್ಕೆ ಮನೇಲಿ ಗಂಜಿ ಹಾಕಿಕೆ ಆಗದ್. ಅದರ ಹುಲಿ ಹೊರಿಕೆ; ಮತ್ತೆ ಸೋಂಪಣ್ಣ ಬೊಯ್ಯೊಕ್‌ಂಡ್ ಮುಂದೆ ಹೋಕ್ಯಾಕನ ಅಟ್ಟೆ ಮುಟ್ಟೆಗನ ಕಾಡ್ ತುಂಬಿಟ್ಟು. ಹಾಂಗೆ ಪುಡೇಲಿ ಹೆಬ್ಬುಲಿ ಕೊಚ್ಚಿದಾಟಿ ಕೇದಗೆ ಬನಂದ ಮೇಲೆ ದೂರಲಿ ಹೋಕಾನ ನಾಯಿ ಎರಡ್ ಸರ್ತಿ ಬೊಗಳೀಕಂಡ್ ಅವರ ಕಾಲ್ ಬುಡಕೇ ಓಡಿ ಬಾತ್. ಈಗ ಪೂರ ಕಚ್ಚೆ ಬಾಲ ಕಟ್ಟಿಟ್ಟು, ಕಾಲ್ ಗಡಗಡಾಂತ ದೆರ್ಪುತಾ ಉಟ್ಟು. ಏ.... ಇದ್ ಎಂತ ಹುಲಿ ಹೊರುವ ನಾಯಿ, ಇಂದ್ ಯಾಕೆ ಇಷ್ಟು ದೆರ್‌ಪುದೂಂತ ಹೇಳಿ ಸೋಂಪಣ್ಣ ಬೆಡಿನಾ ಹೆಗ್‌ಲ್ ಮೇಲೆಂದ ತೆಗ್ದ್ ಮುಂದೆ ಗುರಿ ಇಸಿಕ್‌ಂಡ್ ಮುಂದೆ ಮುಂದೆ ಹೋದೋ. ಮಕ್ಕ ಒಟ್ಟಿಗೆ ಬಾಕನ ಕೈ ಸನ್ನೆಲಿ ಅಲ್ಲೆ ನಿಲ್ಲಿಂತ ಸೂಚನೆ ಕೊಟ್ಟೊ. ನೋಡಿರೆ ಹಂಞ ದೂರಲಿ ದೊಡ್ಡ ಸಿಲುವೆ ಮರ ಬಿದ್ದುಟ್ಟು. ಅದರ ಒಳಗೆ ನೋಕಟೆ ಬೊಳ್ಳಿ ಸುರುಳಿ ಹಾಕಿ ಬಲ್ಲೆ ಕೂಡಿ, ಸರಿ ಕಾಂಬೂದುಲೆಂತೇಳಿ ಎದುರು ಎದುರು ಹೆಜ್ಜೆ ಮೇಲೆ ಹೆಜ್ಜೆ ಇಸಿ ಹೋಗ್ತಾ ಒಳೊ. ಬಲ್ಲೆ ಒಳಗೆಂದ ಎಂತದೋ ಸೇಂಕಿದಾಂಗೆ ಕೇಳ್ತಾ ಉಟ್ಟು. ಇದು ಹಂದೀನೇ ಆಗಿರೋಕೂಂತ ಸೋಂಪಣ್ಣ ಕುದುರೆ ಎಳ್ದ್ ರೆಡಿ ಆಗಿ ಮುಂದೆ ಹೋದೊ. ಅಷ್ಟೊತ್ತಿಗೆ ಅವುಕೆ ಅಲ್ಲಿ ಕಂಡ್‌ದ್ ಹುಲಿ. ಬಾಯಿಂದ 'ಹುಲಿ'ಂತ ಶಬ್ದ ಹೊರ್ಡಿಕೆ ಮುಂದೇನೆ ಹುಲಿ ಇವರ ಮೇಲೆ ಹಾರ್ತ್. ಪಾಪ ಹುಲಿಗೆ ಬೇರೆ ದಾರಿನೆ ಇಲ್ಲೆ. ಹಿಂದೆ ಮರ ಬಿದ್ದುಟ್ಟು ಆಚೀಚೆ ನೋಡಿರೆ ಬೊಳ್ಳಿ ಹಬ್ಬಿ ಗೂಡ್‌ನಾಂಗೆ ದಾರಿ ಕಾಣದೆ ಹುಲಿ ಇವರ ಮೇಲೆ ಹಾರ್‌ಕನ, ಸೋಂಪಣ್ಣ ಬೆಡಿನ ಹೆರ್ಕಿಟ್ಟ್, ಹುಲಿನ ಹಿಡ್‌ಕಂಡೊ. ಇಬ್ಬರೊಳಗೆ ಉರ್ಡಪತ್ತ ಆತ್. ಇವು ಅದರ ನಾಳಿನ ಗಟ್ಟಿ ಹಿಡ್ಕೊಂಡೊಳೊ. ಹುಲಿ ಇವರ ಮೇಲೆ ಮುಸುಂಡಿಗೆ ಪರ್‌ಂಕೆಂಡ್ ಉಟ್ಟು.

ಇದರ ನೋಡಿ ಮಕ್ಕಳಿಗೆ ಈ ಸರ್ತಿ ಸೋಂಪಣ್ಣಂಗೆ ಏನೋ ಒಂದ್ ಆದೆ, ಏನ್ ಮಾಡ್ದೂಂತ ಹೇಳಿಕಂಡ್, ಅವರ ಮಂಞ ಬಾಬಣ್ಣ ಅವರ ಕೈಲಿದ್ದ ಬೊಡ್ಡ್ ಕಡ್ಪತ್ತಿಲಿ ಹುಲಿನ ಕುಂಡೆಗೆ ಕಡೀತಾ ಒಳೊ. ಆದರೆ ಅದು ಹಲ್ಸನ ಕಾಯಿಗೆ ಕಡ್ದಾಂಗೆ ಆಗ್ತಾ ಉಟ್ಟಲ್ಲದೆ ಏನೂ ಆದುಲೆ. ಇನ್ನೊಬ್ಬ ಬಾಬಣ್ಣ ಮಾತ್ರ ಮೊದಲೇ ಪುಕ್ಕ. ಇದರ ನೋಡಿ ಹೆದ್ರಿ, ಹಕ್ಕಲೆ ಇದ್ದ ಕೇರೆ ಮರಕ್ಕೆ ಹತ್ತುದು ಬೀಳ್ದು, ಹತ್ತುದು ಬೀಳ್ದು ಮಾಡಿ ಬೊಬ್ಬೆ ಹಾಕಿಕ್ಯಾಕನ ಅಲ್ಲೆ ಇದ್ದ ದರ್ಗ್ಗನ ಗುಡ್ಡೆ ಹಾಕಿ ಅದರೊಳಗೆ ತಲೆ ಹುಗುಸಿ ಬಿದ್ದ್‌ಕಂಡೊ. ನಾಯಿ ಇದರ ನೋಡಿ ಕುಂಯಿ ಗುಟ್ಟಿ ಎಲ್ಲಿಯೋ ಓಡ್ತ್ ಗೊತ್ತ್‌ಲೆ. ಸೋಂಪಣ್ಣನೂ ಹುಲಿನೂ ಉರ್ದ್ಲಾ ಪತ್ತಾ ಆಗಿ ಆಗಿ ಇಬ್ಬರಿಗೆ ಅಸಮಸ ಆಗುಟು. ಏನೆಲ್ಲ ಆಕನ ಸೋಂಪಣ್ಣನ ಕೈಗೆ ಬಿದ್ದ ಬೆಡಿ ಸಿಕ್ಕಿತ್. ಬೆಡಿ ತೆಗ್ದ್ ಹುಲಿನ ಬಾಯಿಗೆ ಇಸಿ ಟಾಪ್ ಡಿಂ .. ಂತ ಹೊಡ್ದೊ. ಹುಲಿ ರಕ್ತ ಕಾರಿ ಅಲ್ಲೆ ಸತ್ತತ್. ಶಬ್ದ ಕೇಳಿ ಅಲ್ಲಿಂದಲೇ ಬಾಬು ದರ್ಗ್ಗ ಸೆರೇಂದ ನೋಡಿ ಹುಲಿ ಬಿದ್ದುಂಟುಂತ ನಿಗ್‌ಂಟ್ ಆದ ಮೇಲೆ ಎದ್ದೊ.

ಹುಲಿ ಸತ್ತ್ ಬಿದ್ದುಟು ಆದ್ರೆ ಸೊಂಪಣ್ಣನ ನೋಡಿಕೆ ಬೊತ್ತ್. ಮುಂದೇನೇ ಕೆಂಪು ಕೆಂಪು ಶರೀರ ಈಗ ಹಣೆಂದ, ಹುಬ್ಬು, ಮೂಕು, ಮೋರೆ, ಎಲ್ಲಾ ಚೆಲ್ಲ್ ಚೆಲ್ಲಾಗಿ ರಕ್ತ ನೀರ್ ನಾಂಗೆ ಹರೀತಾ ಉಟ್ಟು, ಕೈ ಕಾಲ್ ನಡ್ಗ್‌ತಾ ಉಟ್ಟು . ಹುಲಿ ಮಾತ್ರ ಅದ್, ದರ್ಗ್ ಹುಲಿ. ಅಂದ್ರೆ ಸಣ್ಣದ್ ಹಾಂಗಾಗಿ ಸೊಂಪಣ್ಣ ಬಚಾವ್. ಇಲ್ಲದಿದ್ರೆ ಹುಲಿ ಖಂಡಿತ ಸೊಂಪಣ್ಣನ ಕೊಲ್ಲುತ್ತಿತ್. ಹಿಂಗೆ ಯೋಚನೆ ಮಾಡ್ಕನ ಸೊಂಪಣ್ಣ ಹುಲಿನಾಂಗೆ ನರ್ಕಿಕೆ ಶುರು ಮಾಡ್ದೊ. ನೀರ್.... ನೀರ್‌ಂತ ಕುಡ್ದ್ಯೋಕೆ ಬೇಕುಂತ ಕೇಳ್ದೊ. ಆಗಳೇ ಗೊತ್ತಾದ್ ನಾವು ನಿತ್ತ್‌ಕಂಡ್ ನೋಡ್ತಾ ಒಳಾಂತ. ಈ ಕಾಡಾಲಿ ನೀರ್ ಹೇಂಗೆ ತಾದುಂತ ಬಾಬಣ್ಣ ಯೋಚನೆ ಮಾಡಿ ಗೊರಸಿನ ಕೋಡಿ ಗದ್ದೆ ಕರೆಗೆ ಹೋದೊ. ಮೆಲ್ಲ ಪೋಯಿ ಸಣಪ್ಪಂತ ಹೇಳಿ ಕೈಲಿ ಹಿಡ್ಕಂಡ್, ಬೆಡಿ, ಬೊಡ್ಡ್ ಕಡ್ಪತ್ತಿನ ಎಲ್ಲ ಹಿಡ್ಕಂಡ್ ಹೊರ್‌ಟ್ಟೊ. ಮೋರೆ ತುಂಬ ರಕ್ತ ಅರ್ಸಿಕಂಡ್ ಸೊಂಪಣ್ಣನೇ ಹೂಂ ಹೂ ಂತ ನರ್ಕಿಕ್‌ಂಡ್ ಹೆಜ್ಜೆ ಹಾಕಿದೊ. ಗೊರಸಿನ ಕೋಡಿಗೆ ಬಂದ್ ಮುಟ್ಟಿರೂ ಬಾಬಣ್ಣಂಗೆ ಮಾತ್ರ ದೆರ್ಪುದು ನಿತ್ತತ್ಲೆ. ಹಾಂಗೆ ದರ್ಪಿಕಂಡ್ ಓ ಸುಬ್ಬಣ್ಣ ನೀರ್, ಸೋಂಪ, ಹುಲಿ ಹಿಂಗೆ ಮೂರು ಮೂರು ಸರ್ತಿ ಕರೀತಾ ಒಳೋ. ಎಂತಂಥ ಪೂರ ಹೇಳಿಕೆ ಆದುಲೆ. ಸುಬ್ಬಣ್ಣಂಗೆ ನೀರ್‌ತೇಳ್ದು ಸ್ಪಷ್ಟ ಕೇಳ್ತಾ ಉಟ್ಟು, ಓಯ್ ಹೊನ್ನಮ್ಮ... ಯಾರಿಗೋ ಏನೋ ಆಗುಟ್ಟು. ಯಾರ್ಯಾರ್

ಮರಂದ ಮನಿ ಬಿದ್ದನೋ ಹೇಂಗೆ? ಬಾಬು ನೀರ್ ಬೇಕೂಂತ ಕರೀತಾ ಉಟ್ಟು. ಆ ಮಡ್ಕೆಂದ ದೊಡ್ಡ ಚೊಂಬುಲಿ ಒಂದು ಚೊಂಬು ನೀರ್ ತಕ್‌ಂಡ್ ಪೋಯಿಂತ ಹೆಣ್ಣಿಗೆ ಹೇಳ್ದೊ. ಮಕ್ಕ ಎಲ್ಲಾ ಒಟ್ಟಿಗೆ ಸೇರಿಕಂಡ್ ಒಡ್ದೊ. ಅಲ್ಲಿ ನೋಡಿರೆ ಸೋಂಪಣ್ಣ ರಕ್ತ ಅರ್ಸಿಕ್‌ಂಡ್, ಅಲ್ಲಲ್ಲಿ ಬಿಸ್ಕತ್ತಿಲಿ ಕೊಯ್ದ ಹಾಂಗೆ ಉಟ್ಟು. ಎಂತಾತ್ ಬಾಬು ಅಂತ ಸುಬ್ಬಣ್ಣ ಕೇಳಿಕಾಕನ ಸೋಂಪಣ್ಣನ ಹುಲಿ ಹಿಡ್ತ್‌ಂತ ದರ್ಜಿಕಂಡ್ ಹೇಳ್ತ್. ಅಷ್ಟೊತ್ತಿಗೆ ಸುಬ್ಬಣ್ಣನ ಕೈಲಿದ್ದ ನೀರ್‌ನ ಎಳ್ದ್ ಸೋಂಪಣ್ಣ ಗಟ ಗಟಾಂತ ಕುಡ್ತ್. ಚೊಂಬುನ ಹೂಂ.....ತ ಹೆರ್ಕಿ ಗುಡ್ಡೆಗೆ ಬೀಸಾಡ್ತ್. ಆಗ ನಾವು ಮೊರೆ ಮೊರೆ ನೋಡಿ ಮೆಲ್ಲಂಗೆ ಮಾತಾಡ್ದೊ. ಸೋಂಪಣ್ಣಂಗೆ ಹುಲಿ ಮರ್ಲ್ ಶುರು ಆಗುಟುಂತ ಹಾಂಗೆ ಮೆಲ್ಲ ಕರ್‍ಕೊಂಡು ಹೋಗಿ ಮನೇಲಿ ಇದ್ದ ಸೊಪ್ಪುನ ಎಲ್ಲಾ ಗುದ್ದಿ ಗಾಯ ಆದ್‌ಲಿಗೆಲ್ಲಾ ಉಜ್ಜಿದೋ. ಸೋಂಪಣ್ಣ ಮಾತ್ರ ಮಲ್ಗಿದ್ದಲ್ಲೇ ಹಾರಿಹಾರಿ ಬೀಳ್ತ್ತಿದೋ. ಹುಲಿನಾಂಗೆ ಮಾಡಿಕಂಡ್ ರಾತ್ರೆ ಎಲ್ಲಾ ನಿದ್ದೆ ಮಾಡ್ತ್‌ಲೆ. ಊರುನೊವು ಕುಟುಂಬದೊವು ಎಲ್ಲಾ ನೋಡಿಕೆ ಬಂದೊ. ಎಲ್ಲವರ ಬಾಯಿಲಿ ಹುಲಿಗೂ ಸೋಂಪಣ್ಣಂಗೂ ಜಗಳ ಆಗಿ ಸೋಂಪ ಹುಲಿನ ಕೊಂದತ್. ಏನೇ ಆಗಲಿ ಹುಲಿನ ಗೆದ್ದದ್ ಸೋಂಪಣ್ಣನೇಂತ ಮಾತಾಡಿಕಂಡೊ. ಅಂದ್‌ಂದ ಮೇಲೆ ಸೋಂಪಣ್ಣ ಖಾಲಿ ಸೋಂಪಣ್ಣ ಆಗದೆ ಹುಲಿ ಸೋಂಪಣ್ಣಂತ ಊರ್‌ಲೆಲ್ಲಾ ಕರೇಕೆ ಶುರು ಮಾಡ್ದೊ. ಬಾರಿ ಗರ್ವದ ಸೋಂಪಣ್ಣ, ಜೀವ ಇರಿಕನ ಮುಟ್ಟ ಬಾರಿ ಗಟ್ಟಿ ಮುಟ್ಟಾಗಿದ್ದೊ. ಪ್ರಾಯ ಹೋದ ಕಾಲಲಿ ದೆವ್ವ ದೇವ್ರುಗಳ ಚಾಕರಿ ಮಾಡಿ ಒಳ್ಳೆ ಹೆಸ್ರು ಪಡ್ದೊ. ಈಗಳೂ ಅವರ ಮಂಞ ಬಾಬಣ್ಣ, ಅವರ ಮಕ್ಕ ಬದ್‌ಕಿಕಂಡ್ ಒಳೊ. ಅವರ ಸಾಹಸದ ಕಥೆ ಈಗೊಳು ಜನ ಹೇಳುವೆ. ಅವರ ಮಕ್ಕಳಿಗೆ ಕೂಡಾ ಹುಲಿಂತ ಸೇರ್ಸಿ ಇಂದ್ ಕೂಡಾ ಕರ್ದವೆ. ಹಾಂಗಾಗಿ ಅವು ಎಲ್ಲವುಕೆ ಹುಲಿ ಸೊಂಪ, ಹುಲಿ ಅಜ್ಜ, ಹುಲಿ ಉಗ್ಗಪ್ಪ ಆಗಿ ಇಂದ್ ಜೀವಂತ ಆಗಿ ಇಲ್ಲದಿದ್ದರೂ ಅವು ನಮ್ಮ ಮುಂದೆ ಇದ್ದಾಂಗೆ ಒಳೊ. ಅವರ ಜೀವನ ಕಥೆಗೆಲ್ಲ ನಾವುಗೆ ಆದರ್ಶವಾಗಿ ಉಟ್ಟೊಂತ ಹೇಳಿಕಂಬಕೆ ಕುಷಿ ಆದೆ.

* * * * *



# ತಟಪಟ ಹನಿಯಪ್ಪ

ಒಂದ್ ಹಳ್ಳಿಲಿ ಒಂದ್ ಅಜ್ಜಿ ಇತ್ತ್. ಅದ್‌ಕೆ ಅದರ್ದ್ದೇ ಆದ ಸಂಸಾರ ಯಾರ್ ಇತ್ಲೆ. ಕಾಡ್ ಕರೇಲಿ ಒಂದ್ ಸಣ್ಣ ಬಿಡಾರಲೀ ತೀರ್ದ್ದ ಕೆಲ್ಸ ಮಾಡಿಕೆಂಡ್ ಬದ್‌ಕ್‌ತಿತ್ತ್. ಅದರ ಬಿಡಾರ ಎಲ್ಲ ತುಂಡಾಗಿ ನೇಲ್‌ತಿತ್ತ್. ಹಿಂಗಾಗಿ ಮಳೆಗಾಲ ತೇಳಿರೆ ಆ ಅಜ್ಜಿಗೆ ತುಂಬ ಹೆದ್‌ರಿಕೆ. ಎಲ್ಲಾ ವರುಷಗಳಲ್ಲಿ ಬರುವಾಂಗೆ ಆ ವರ್ಷ ಕೂಡಾ ಮಳೆ ಬಾಕೆ ಶುರು ಆತ್. ಒಂದು ದಿನ ಜೋರ್ ಮಳೆ ಗಾಳಿ ಬಾಕೆ ಶುರು ಆತ್. ಅಜ್ಜಿಗೆ ಏನ್‌ಮಾಡ್ಡುದ ತಲೆ ಬಿಸಿ ಆತ್. ಮಳೆಗೆ ಎಲ್ಲ ಕಡೆ ನೀರು ಒಳಗೆ ಬೀಳಿಕೆ ಶುರು ಆತ್. ಇದ್ದ ಬದ್ದ ಒಟ್ಟೆ ಪಾತ್ರೆಗಳ ನೀರ್ ಬೀಳುವಲ್ಲಿಗೆ ಅಜ್ಜಿ ತಂದ್ ಇಸಿತ್. ಎಲ್ಲ ಮುಗ್ದ ಮೇಲೆ ಅಳಿಗೆ, ಮರ್ಚಟೆ, ಮಡೆಗುತ್ತಿ ಸಹ ಇಸಿತ್. ಆದರೆ ಎಲ್ಲ ಕಡೆ ಇಸುವಸ್ಟ್ ಪಾತ್ರೆ ಕೂಡಾ ಅಜ್ಜಿನಕ್ಕಲೆ ಇತ್ಲೆ. ಅಜ್ಜಿ ನೀರ್ ಬೀಳದ ಒಂದು ಮೂಲೇಲಿ ಹೋಗಿ ಕುದ್‌ಕಂಡ್ ಹೇಳಿಕೆ ಶುರು ಮಾಡ್ತ್. ಎಂತ ಬಂದರೂ ಹೆದ್ರಿಕ್ಕಿಲ್ಲೆ, ಈ ತಟಪಟ ಹನಿಯಪ್ಪ ಬಂದ್ರೆ ಮಾತ್ರ ದೇವ್ರೇ ಗತಿ ಅಂತ! ಅಷ್ಟೊತ್ತಿಗೆ ಕತ್ತಲೆ ಆಗಿತ್ತ್. ಕಣ್ ಬುಟ್ಟ್ ನೋಡಿರೂ ಮಯ ಮಯ ಕತ್ತಲೆ. ಆ ಕತ್ತಲೇನೂ

ಎಂತದೊ ಒಂದು ಬಣ್ಣ ಬಣ್ಣದ ವಸ್ತು ಒಳಗೆ ಬಂದಾಂಗಾತ್. ಬಂದ ಆ ಬಣ್ಣದ ವಸ್ತು ಅಜ್ಜಿಗೆ ಕುಂಡೆ ಹಾಕಿ ಕುದ್ದತ್. ಆದ್ರೆ ಅಜ್ಜಿಗೆ ಅದ್ ಲೆಕ್ಕಕೇ ಇಲ್ಲೆ. ಅಜ್ಜಿ ಮಾತ್ರ ಹೇಳ್ತಾನೆ ಇತ್ತ್. ಎಂತ ಬಂದರು ನಾ ಹೆದ್ರಿಕ್ಕಿಲ್ಲೆ, ಈ ತಟ ಪಟ ಹನಿಯಪ್ಪಂಗೆ ಮಾತ್ರ ಹೆದ್‌ರ್‌ದೇ ಉಪಾಯ ಇಲ್ಲೇ ಅಂತ! ಎದ್‌ರ್ ಕುದ್ದ ಹುಲಿಗೆ ತಲೆ ಬಿಸಿ ಆಕೆ ಶುರು ಆತ್. ಎಲ್ಲೊವು ನನ್ನ ಕಂಡರೆ ಹೆದರಿ ಓಡುವೆ ಈ ಅಜ್ಜಿಗೆ ಏನ್ ಹಂಕಾರ ಅಂತ! ಹಾಂಗೆ ಹುಲಿನೂ ಯೋಚನೆ ಮಾಡಿಕೆ ಶುರು ಮಾಡ್ತ್! ಅಲ್ಲಾ...... ಈ ತಟಪಟ ಹನಿಯಪ್ಪ ಯಾರ್ ? ನನ್ನಂದೊಳು ದೊಡ್ಡ ಜನ ಯಾರಾಗಿರ್ದು ಅಂತ.....

ಆ ಊರ್‌ಲೀ ಒಬ್ಬ ಮಡ್ಯೋಳ ಇತ್ತ್. ಅವಂಗೆ ಊರ್‌ಲಿ ಇದ್ದವರ ಬಟ್ಟೆ ಓಗ್ದ್ ಮಡಿ ಮಾಡ್ದು ಕಾಯಕ. ಅವನ್ನೊಟ್ಟಿಗೆ ಒಂದ್ ಬಡಕತ್ತೆ ಇತ್ತ್. ಬಟ್ಟೆ ಓಗೆಕಾಕನ ಗಂಟ್ ಕಟ್ಟಿ ಈ ಕತ್ತೆನ ಬೆನ್ನ ಮೇಲೆ ಹಾಕಿ ಹಳ್ಳಕ್ಕೆ ಹೋಗಿ ಬಾದು ಅವನ ಪದ್ಧತಿ. ಅಂದ್ ಒಂದ್ ದಿನ ಇವನ ಕತ್ತೆ ಕೈ ಕೊಟ್ಟುಟು. ಕತ್ತೆ ಇಲ್ಲದಿದ್ದರೆ ಅಗಸಂಗೆ ಆದುಲೆ. ಹಾಂಗೆತ ಇಂವ ಸುಮ್ಮನೆ ಕುದ್ರಂವ ಅಲ್ಲ. ಕತ್ತೆನ ಹುಡ್ಕಿಕೊಂಡು ಮನೆ ಮನೆ ತಿರ್ಗಿತ್. ಎಲ್ಲೂ ಸಿಕ್ಕಿತ್ಲೆ. ಹಾಂಗೆ ಅಜ್ಜಿನ ಮನೆಗೂ ಬಾತ್. ಹೊರಗೆ ನಿಂತ್ ಅಜ್ಜಿನ ಕರ್ದ್ ನನ್ನ ಕತ್ತೆ ಒಂದು ಬಾತ ಂತ ಕೇಳ್ತ್. ಅಜ್ಜಿಗೆ ಯಾವುದರ ಗೊಡವೆ ಇಲ್ಲೆ. ನಿನ್ನ ಕತ್ತೆ ಅಲ್ಲ ಹುಲಿ ಬಂದರೂ ನಾ ಹೆದರಿಕಿಲೆ ನಂಗೆ ಈವಂದೇ ತಟಪಟ ಹನಿಯಪ್ಪಂದ್ ಮಾತ್ರ ಹೆದರಿಕೆ. ಬಂದ ಮಡ್ಯೋಳ ಅಜ್ಜಿನೊಟ್ಟಿಗೆ ಮಾತಾಡಿಕಂಡ್ ಒಳಗೆ ಹೊಕ್ಕತ್. ಅಲ್ಲಿ ನೋಡಿರೆ ಕತ್ತಲೆಲಿ ಹುಲಿ ಸುಮ್ಮನೆ ಕುದ್ದುಟು. ಮಡ್ಯಾಳಂಗೆ ಹುಲಿ ಕತ್ತೆನಾಂಗೆ ಕಂಡತ್. ನಿನ್ನ ಪಡೆ ಇಲ್ಲಿ ಕುದ್ದಾಳಂತೇಳಿ ಎರಡು ಬುಟ್ಟತ್. ಹುಲಿಗೆ ಈಗ ಹೆದ್ರಿಕ್ಕೆ ಆತ್. ಓ... ಅಜ್ಜಿ ಹೇಳ್ದ ತಟಪಟ ಹನಿಯಪ್ಪ ಇವಾನೇ ಅಂತ ಓಡಿಕೆ ಶುರು ಮಾಡ್ತ್. ಆದರೆ ಮಡ್ಯೋಳ ಬುಡಕಲ್ಲ. ಹುಲಿನ ಬೆನ್ನ ಮೇಲೆ ಹಾರಿ ಕುದ್ದ್ ಮತ್ತೆರಡು ಬುಟ್ಟತ್. ಹುಲಿ ಹೆದ್ರಿ ಕಾಡಿಗೆ ಓಡ್ತ್. ಮಡ್ಯಾಳ ಏ ನಿನ್ನ ಪಡೆ ಮನೆಗೆ ಹೋದ್ ಬುಟ್ಟ್ ಕಾಡಿಗೆ ಹೋದಿಯಾನಾ ನಿನ್ನ ಕೊಲ್ಲದೆ ಬುಡಿಕಿಲೆ ಅಂತ ತಾರಮಾರ ಬೊಡ್ತ್. ಹುಲಿ ಪಾಪ ಕಾಡಿಗೆ ಓಡದೆ ಊರಿಗೆ ಯಾಕೆ ಓಡ್ತೆ.

ಹೀಂಗೆ ಓಡಿ ಓಡಿ ಮಡ್ಯೋಳನೂ ಬುಟ್ಟುತ್ತಲೆ. ಹುಲಿ ತಿರ್ಗಿ ಊರಿಗೂ ಬಾತ್‌ಲೆ. ಓಡ್ತಾ ಓಡ್ತಾ ಹಾಂಗೆ ಬೊಳ್ಪಾಕಂಡ್ ಬಾತ್. ಮಡ್ಯೋಳ ಮೆಲ್ಲ ಈ

ಕತ್ತೆಗೆ ಹುಚ್ಚೆ ಶುರು ಆಗುಟು ಕಂಡದೆ ಅಂತ ಬೆನ್ನಿಗೆ ಹೊಡೆಕೆ ನೋಡಿರೆ ಪಟ್ಟೆ ಪಟ್ಟೆ ಬಣ್ಣ ಕಾಂಬಕೆ ಶುರು ಆತ್. ಮಡ್ಯೊಳಂಗೆ ಪರಿಸ್ಥಿತಿ ಅರ್ಥ ಆತ್. ಇದ್ ನನ್ನ ಕತ್ತೆ ಅಲ್ಲ. ನಾ ಈಗ ಹುಲಿ ಬೆನ್ನಲಿ ಕುದ್ದೊಳೆ. ಓ ದೇವರೇ ಏನ್ ಮಾಡ್ದ್ ಅಂತ ಯೋಚನೆ ಮಾಡಿಕೆ ಶುರು ಮಾಡ್ತ್. ಮಡ್ಯಾಳಂಗೆ ಗೊತ್ತಿಲ್ಲದೆ ಒಂದೆರಡು ಹನಿ ಉಚ್ಚೆ ಹೊಯ್ದ್ ಹೋತ್. ಹೇಂಗಾರ್ ಮಾಡಿ ಈ ಸರ್ತಿ ಬದ್ಕಿ ಒಳ್ದರೆ ದೈವಕ್ಕೆ ಹರ್ಕೆ ಕೋಟನೇಂತಾ ಹೇಳಿಕಾಂತ್. ಹಾಂಗೆ ಹೋಗ್ತಾ ಹೋಗ್ತಾ ದೂರಲ್ಲಿ ಒಂದು ಮರದ ಬೊಳ್ಳಿ ಇಳ್ದದ್ ಕಂಡತ್. ಮಡ್ಯಾಳ ಪ್ಲಾನ್ ಮಾಡಿ, ಹುಲಿ ಆ ಮರದ ಕೆಳಗೆ ಓಡ್‌ಕನ ಬೊಳ್ಳಿಲಿ ಒಮ್ಮೊಲೆ ನೇಲಿಕಾಂತ್. ಇತ್ತ ಮಡ್ಯಾಳ ಬದ್ಕಿದೆ ಅಂತ ಖುಷಿ ಪಟ್ಟರೆ, ಹುಲಿನೂ ಕೂಡಾ ಅಬ್ಬಾ ಹೆಂಗಾರ್ ಈ ತಟ ಪಟ ಹನಿಯಪ್ಪಂದ ಬಚವಾದೆ ಅಂತ ಮತ್ತೆ ಓಡಿಕಂಡೇ ಹೋತಿತ್.

ಎದುರಿಗೆ ಒಂದು ಕುದ್ಕ, ಹುಲಿ ಓಡಿ ಬಾದರ ಕಂಡ್, ಅರೆ ಹುಲಿಯಣ್ಣ ನೀ ಎಲ್ಲಿಗೆ ಹೀಂಗೆ ಓಡ್ದ್ ಅಂತ ಕೇಳ್ತ್. ಆಗ ಹುಲಿ ನೀ ಸುಮ್ಮನಿರ್ ನಾ ಬದ್ಕಿ ಒಳ್ದದೇ ದೊಡ್ಡ ವಿಷ್ಯ ಅಂತ ನಡ್ದ ಕಥೆ ಹೇಳ್ತ್. ಆಗ ಆ ನರಿಗೆ ಯಾಕೋ ಮನ್ಸ್ ಕೇಳ್ತಲೆ. ಅಂಗಾರೆ ನಂಗೆ ತಟಪಟ ಹನಿಯಪ್ಪನ ನೋಡೋಕುಂತ ಹಠ ಹಿಡ್ತ್. ಆಗ ಹುಲಿ ಹೇಳ್ತ್ ನಿಂಗೆ ಬೇಡದ ಕೆಲ್ಸ, ನನ್ನ ಬೆನ್ನಿಗೆ ಹೊಡ್ದದದ್ದ್ ನಂಗೆ ಒಂದು ವಾರ ಬೇಕು ಸರಿಯಾಕೆ. ನೀ ಸುಮ್ಮನೆ ಹೋಗ್ ಅಂತ ಹೆದರ್ಸಿತ್. ಆದ್ರೆ ಕುದ್ಕ ಬುಡೊಕಲ್ಲ. ನೀ ಹೆದರ್ಬಡ. ನನ್ನ ಉಪಾಯ ಏನ್‌ಂತಾ ನಿಂಗೆ ಗೊತ್ತ್‌ಲೆನಾ. ಅಂವ ಯಾಂವ ತಟಪಟ ಹನಿಯಪ್ಪ... ನಿಂಗೆ ಅಂಥ ಹೆದ್ರಿಕೆ ಆದರೆ ನನ್ನ ಬೀಲನೂ ನಿನ್ನ ಬೀಲನೂ ಗಂಟು ಹಾಕೊಮೊ ಅಂತ ಹೇಳ್ತ್. ಹುಲಿ ಅರೆ ಮನ್ಸಂದ ಒಪ್ಪಿ ಒಬ್ಬರನ್ನೊಬ್ಬ ಬಾಲಕ್ಕೆ ಗಂಟು ಹಾಕಿ ವಾಪಾಸ್ಸು ಬಂದ ದಾರಿಲಿ ಹುಲಿ ಕರ್ಕ್ಯಂಡ್ ಹೊರ್ಟತ್.

ಇತ್ತ ಮಡ್ಯಾಳ ಹೆಂಗೋ ದೆರ್ಪಿ ದೆರ್ಪಿ ಬಳ್ಳಿಲಿ ಮೇಲೆ ಹೋಗಿ ಮರದ ಕೊಡಿಲಿ ಕುದ್ದುಟು. ಹೆಂಗಾರ್ ಸರಿ ಬೊಳ್ಳಾದ ಮೇಲೆ ಇಳ್ದ್, ಮನೆಗೆ ಹೋದೂಂತ ನಿರ್ಧಾರ ಮಾಡ್ತ್. ಹಿಂಗೇ ಕುದ್ಕಂಡ್ ಇರ್‌ಕನ ಹುಲಿ ವಾಪಾಸ್ಸು ಬಾದು ಕಂಡತ್. ಅದರೊಟ್ಟಿಗೆ ಕುದ್ಕನೂ ಒಳದ್ ಕಂಡ್ ಇದ್ ಏನೋ ಉಪಾಯ ಮಾಡಿ ಕರ್ಕಂಡ್ ಬಂದ್‌ಂದ್‌ಂತ ಗ್ರೇಸಿ ಇನ್ನ್ ನಂಗೆ ಉಳಿಗಾಲ ಇಲ್ಲೆ ಅಂತ ಇದ್ದ ಬದ್ದ ಧೈರ್ಯ ಮಾಡಿ ಗಟ್ಟಿ ಸ್ವರಲೀ ನೀ ವಾಪಸ್ಸ್ ಬಂದನಾ. ಒಟ್ಟಿಗೆ

ಕುದ್ಕನೂ ಕರ್ಕಂಡ್ ಬಂದಳಾ? ನಿಮ್ಮಿಬ್ಬರ ಇಲ್ಲದಾಂಗೆ ಮಾಡಿನೆಂತ ಮರಂದ ಇಳ್ದಾಂಗೆ ಮಾಡ್ತ್. ಇದರ ನೋಡಿ ಹುಲಿಗೆ ಜೀವ ಹೋದಾಂಗೆ ಆಗಿ ತಿರ್‍ಗಿ ಓಡಿಕೆ ಶುರು ಮಾಡ್ತ್. ಕುದ್ಕ ಎಷ್ಟ್ ಹೇಳಿರೂ ಕೇಳ್ತ್‌ಲೆ. ಹುಲಿ ಓಡ್‌ಕನ ಕುದ್ಕ ಪಾಪ ಹಿಂದೆ ಹಿಂದೆ ಓಡಕಾತ್. ಬಾಲ ಕಟ್ಟಿದಲ್ಲಾ! ಎಷ್ಟು ದೂರಾಂತ ಹಿಂದೆ ಓಡ್‌ಕ್. ಕುದ್ಕ ಇದ್ದ ಗಿಡ್ಡೆಗೆ, ಕಲ್ಲಿಗೆ ತಾಂಗಿ ಬಾಯಿಲ್ಲಿ ರಕ್ತ ಬಾಕೆ ಶುರು ಆತ್. ಓ ಹುಲಿಯಣ್ಣಾ ನಾ ಸತ್ತೆ. ಓಡ್‌ಬಡ. ನಿಲ್ಲೂಂತ ಹೇಳಿರೂ ಹುಲಿ ನಿತ್ತ್‌ಲೆ. ಸ್ವಲ್ಪ ದೂರ ಹೋಕನ ಕುದ್ಕನ ಸ್ವರ ನಿತ್ತ್ ಹೋತ್. ಆಗಲೇ ಪ್ರಾಣ ಪಕ್ಷಿ ಹಾರಿ ಹೋಗುಟು. ಹುಲಿ ಓಡಿ ಓಡಿ ಬಚ್ಚ್‌ಕಾಕನ ನಿತ್ತ್‌ತ್. ತಿರ್‍ಗಿ ಬೀಲ ಬಿಚ್ಚಿ ನೋಡಿರೆ ಕುದ್ಕ ಸತ್ತ್ ಮರಗಟ್ಟಿಟ್ಟು. ಆಯಾಸ ಮುಗ್ದ ಮೇಲೆ ಹುಲಿ ಕುದ್‌ಕಂಡ್ ಕುದ್ಕನ ತಿಂಬಕೆ ಶುರುಮಾಡ್ತ್. ಆದರೂನು ಮನ್ಸಲಿ ತಟಪಟ ಹನಿಯಪ್ಪನ ಯೋಚನೆ ಮಾತ್ರ ಹೋತೇಲೆ. ಇನ್ನ್ ಆ ಕಡೆ ತಲೆ ಕೂಡಾ ಹಾಕಿ ನಿಲ್ಲುದುಲೆ ಅಂತ ನಿರ್ಧಾರ ಮಾಡಿ ಎದ್ದ್ ಕಾಡ್‌ನ ಅತ್ತ ಒಳಗೆನೇ ನಡ್‌ಕಂಡ್ ಹೋತ್!

* * * * *



# ಬೆದ್‌ರ್ ಪಾಯಸ

ಗುಂಡ ಮದ್ವೆಯಾಗಿ ತನ್ನ ಹೆಣ್ಣ್‌ನ ಆಟಿ ಕುದ್ರಿಕೆ ತವ್ರ್‌ಗೆ ಕಳ್ಸಿತ್. ಇಂದ್ ಕರ್ಕಂಡ್ ಬಾಕೆ ಹೋಕು. ಶುರುನ ಕೋಳಿ ಕೂಂಗುಕಾಕನನೇ ಎಚ್ಚರಿಕೆ ಆಗುಟು. ಹಾಂಗೆ ಕಣ್ಣ್ ಬುಟ್ಟ್ ಏನೆಲ್ಲಾ ಯೋಚನೆ ಮಾಡಿಕ್‌ಂಡ್ ಮಲ್ಗಿದ ಗುಂಡಂಗೆ; ಮಕ್ಕಳಾಟಿಕೆಯೆಲ್ಲ ಹೋಗಿ ಜವಾಬ್ದಾರಿ ಒಂದು ಹೆಚ್ಚಿಗೆ ಆತಲ್ಲ ಅಂತ ಯೋಚನೆ ಮಾಡಿ, ಹಾಂಗೆ ಕಣ್ ಉಜ್ಜಿ ಮೇಲೆ ಹಾಕಿದ ಒಲ್ಲಿನ ಕರೆಗಾಕಿ, ಕೈಲಿ ಕಣ್ಣಿನ ಉಜ್ಜಿಕೆಂಡ್ ಎದ್ದ್ ಕುದ್ದತ್. ಪ್ರಾಯ ಆದ ಅವ್ವ ಒಳಗಿಂದ ನರ್ಕುದು ಕೇಳ್ತಾ ಇತ್ತ್. ಗುಂಡ ಮಲ್ಗಿಕೆ ಹಾಕಿದ ಗೋಣಿ, ಅದರ ಮೈ ಮೇಲೆ ಹಾಸಿದ ಅವ್ವನ ಸೀರೆ ತುಂಡು ಒಟ್ಟಿಗೆ ಸೇರ್ಸಿ, ಸುರುಳು ಮಾಡಿ ಕಂಬಂದ ಮೂಲೆಲಿ ಕಟ್ಟಿದ ಜೋಡು ಬಳ್ಳಿಗಳ ನಡುಲಿ ಸಿಕ್ಸಿ ಹಾಕಿತ್. ಒಲೆ ಹಕ್ಕಲೆ ಹೋಗಿ ಬೂದಿ ನಡುಂದ ಮಸಿ ತುಂಡು ತೆಗ್ದ್ ಉರ್ಗಿ ಬಾಯಿಗ್ಗಿಸಿ, ಹಲ್‌ಲ್ಲಿ ಕಚ್ಚಿ ಪುಡಿ ಮಾಡಿ, ದೊಡ್ಡ ಬೆರ್ಲಿಂದ ಉಜ್ಜಿಕೆ ಶುರು ಮಾಡಿ ನೀರಡಿ ಕೊಟ್ಟಿಗೆ ಹಕ್ಕಲೆ ಹೋತ್. ನಿನ್ನೆ ಮಿಂದ ಮಣ್ಣಿನ ಮಡಿಕೆ ಅಡೀಲಿ ಇದ್ದ ನೀರ್‌ನ ಬೆದ್‌ರ್‌ನ ಪಾಟೆಲಿ ಗೋಂಚಿ ಮೋರೆ, ಬಾಯಿ ತೊಳ್ಕಾಂತ್. ಅಲ್ಲೆ ನಾರ್ಕಣೆ ಬಳ್ಳಿಲಿ ಒಣ್‌ಗಿಕೆ ಹಾಕಿದ

ಸೀರೆ ತುಂಡ್‌ಲಿ ಮೋರೆ ಒರ್ಸಿ ಹಿಂದಕ್ಕೆ ಮನೆಗೆ ಹುಕ್ಕತ್. ಅವ್ವ ಮಾಡಿಸಿದ ಗಂಜಿ ಮಡ್ಕೆನ ಅಡಿಲಿ ಉಳ್ದ ಗಂಜಿ ತೆಳಿನ ಮಣ್ಣಿನ ಚೆಟ್ಟೆಗೆ ಹಾಕಿ ಬಗ್ಗಿಸಿ ಕುಡ್ತ್. ಹೊಟ್ಟೆ ತಂಪಾದಂಗಾತ್.

ಅಗ್ಲೇ ಬೆಳಕ್ ಹರ್ದ್ ಬಾತಿತ್ತ್. ಬಾನ್‌ಲಿ ತಂಪು ಇತ್ತ್. ಸೂರ್ಯನ ಕಿರಣ ಹೊರಗೆ ಬಾಕೆ ಮಾತ್ರ ಬಾಕಿ. ಗುಂಡ ಹಟ್ಟಿಗೆ ಹೋದವನೆ ಗೂಟಕ್ಕೆ ಕಟ್ಟಿದ ದನಗಳಲ್ಲಿ ಒಂದೊಂದೇ ಬೊಳ್ಳಿ ಬಿಚ್ಚಿ ಕಾಡಿಗೆ ಮೇಯಕೆ ಬುಟ್ಟೋತ್. ಹಿಂದೆಂದ ಕೈಯಿಲಿ ಕುಂಞಿ ಕತ್ತಿ ಹಿಡ್‌ಕಂಡ್ ತಲೆಗೆ, ಹರ್ದ ಸೀರೆನ ಮುಂಡಾಸ್ ಕಟ್ಟಿ, ಕಾಡ್‌ನ ಕಡೆಗೆ ಹೆಜ್ಜೆ ಹಾಕಿತ್. ಹೊರಗೆ ಹೋಕನ ಅವ್ವ.... ನಾ ದನಗಳ ಕಾಡಿಗೆ ಹೊಡ್ಕ್ಯಂಡ್ ಹೋಗ್ತಾ ಒಳೆ ಅಂತ ಕರ್ದ್ ಹೇಳಿಕೆ ಮರ್ತತ್‌ಲೆ. ಹೇಂಗಿದ್ದರೂ ಮಧ್ಯಾಹ್ನವರೇಗೆ ಮೇಯ್ಸಿ, ಮತ್ತೆ ಹೊಡ್ಕಂಡ್ ಬಂದ್ ಹಟ್ಟೀಲಿ ಕಟ್ಟುದು. ಮಧ್ಯಾಹ್ನದ ಮೇಲೆ ಸಣ್ಣ ಪುಟ್ಟ ಕೆಲ್ಸಗಳ ಮಾಡಿ ಹಿಂಬೊತ್ತ್ ಗಾಕನ ಹೆಣ್ಣ್‌ನ ಮನೆಗೆ ಹೋಕುಂತ ಮನ್ಸಲಿ ಲೆಕ್ಕಚಾರ ಹಾಕಿತ್ತ್ ಗುಂಡ.

ಹೊತ್ತ್ ಹೋದಾಂಗೆ ಗುಂಡಂಗೆ ಮನ್ಸಲಿ ಒಂದು ರೀತಿ ಖುಷಿ. ಹೆಣ್ಣ್‌ನ ಮನೆಗೆ ಮದ್ವೆ ಆದ ವರ್ಷ ಹೋದ್‌ಂತೇಳಿರೆ ಅಲ್ಲಿ ಹೇಂಗೇ ಅಂತ. ಅವ್ವ ಮನೇಲಿ ಇಂದ್ ಒಂದೇ ಇರೋಕು. ಪಕ್ಕದ ಮನೆ ಪದ್ಮಕ್ಕನ ಹೇಳೋಕು. ಪ್ರಾಯ ಆದ ಅವ್ವ ರಾತ್ರೆ ಕುಡೆಕೆ ಎನಾರ್ ಆದ್ರೆ ಯಾರ್ ಒಳೊ. ಹತ್ತಾರ್ ಮೈಲ್ ನಡ್ಯೋಕು. ಆಗಾಗ ಮಳೆ ಬರುವ ಲಕ್ಷಣ. ಕತ್ತಲೆ ಕತ್ತಲಾಕನ ಜೋರ್‌ಲಿ ಮಳೆ ಬಂದರೆ ಹಳ್ಳ ಕಟ್ಟಿರೆ ನಂಗೆ ದೇವ್ರೇ ಗತಿ ಅಂತ ಮನ್ಸಲಿ ಒಂದ್‌ಕಡೆ. ನಂಗೆ ಹಳ್ಳ ಮಿೂಸಿಕೆ ಗೊತ್ತ್‌ಲೆ. ಹಾಂಗೇನಾದ್ರ್ ಹಳ್ಳ ಕಟ್ಟಿರೆ ಕಾಟಿ, ಹುಲಿಗಳ ಹೆದ್ರಿಕೆ ಕೂಡಾ ಇತ್ತ್. ಗುಂಡ ಕೈಲ್ಲಿದ್ದ ಕೊಳಲ್‌ಲಿ ಅವಂಗೆ ಗೊತ್ತಿದ್ದ ರಾಗಂದ ಉರ್ಗಿ ಉರ್ಗಿ ದನಗಳ ಕೂಡಾ ಬೋರಾಗದಾಂಗೆ ನೋಡಿಕಾಂತಿತ್. ದನಗಳ ಹೊಟ್ಟೆ ತುಂಬುತ್ತಿದ್ದ ಹಾಂಗೆ ಗುಂಡ ಕೂಡಾ ಸೊಂಟಲಿ ಸಿಕ್ಕಿಸಿದ್ದ ಚೆಂಚಿಂದ ಆಗಾಗ ಎಲೆ ಅಡಿಕೆ ತಿಂದ್ ಬಾಯಿ-ಮೈ ಬೆಚ್ಚಂಗೆ ಮಾಡಿಕಾಂತೀತ್ ಹಾಂಗೂ ಹಿಂಗೂ ಸೂರ್ಯ ನಡುನೆತ್ತಿಂದ ಪಡ್ವದ ಕಡೆಗೆ ಜಾರ್‌ತಿತ್ತ್. ಒಂದು ಕಡೆ ದನಗಳ ಹೊಟ್ಟೆ ತುಂಬಿಕಾಕನ ಗುಂಡನ ಹೊಟ್ಟೆ ಚರು-ಚುರು ಹೇಳಿಕೆ ಶುರು ಮಾಡಿತ್. ಕಾಡಲಿ ಸಿಕ್ಕಿದ ಜೋಂಪುಳು, ಗೊಟ್ಟೆ, ಚೂರಿ ಹಣ್ಣು ತಿಂದ್ ಚೋಡಿ ನೀರ್ ಕುಡ್ದರೆ ಎಲ್ಲಿ ಸಾಕಾದೆ? ಬೇಗ ಬೇಗ ಬೆಳ್ಳಿ, ಕಮಿಲೆ, ಮೈಕಣ, ಕೆಂದ, ಗುರುವಣ, ಕೊಡ್ಯ, ಎಲ್ಲವರ, ಸೇರ್ಸಿ ಹೊಡ್ಕಂಡ್ ಬಂದ್ ಹಟ್ಟಿಲಿ ಕಟ್ಟಿತ್. ಗುಂಡನ ಆಜ್ಜೆನ ಮೂಖ ಪ್ರಾಣಿಗ ಪಾಲಿಸಿದೊ. ಇಂದ್ ಯಾಕೆ ನಮ್ಮ ಯಜಮಾನ ಬೇಗ ಹೊರ್‌ಡಿಸಿತ್ ಅಂತ ಗ್ರಹಿಸಿಕಂಡೊ. ಬೇಗ ಬೇಗ

ಕೆಲ್ಸ ಮಾಡಿ ಚೂರು ಮಿೂದ್‌ಕಂತ್. ಅವ್ವ ಮಾಡಿ ಇಸಿದ ಗಂಜಿ ಮತೆ ಕೆಸದ ದಂಡ್‌ನ ಗೈಪು ಹಾಕಿ ಚೂರು ಮೊಸರ್‌ನ ಸೇರ್ಸಿ ಹೊಟ್ಟೆ ತುಂಬ ಊಟ ಮಾಡ್ತ್. ಚೂರು ಹೊಟ್ಟೆ ಇಸಿದ್; ಮತ್ತೆ ಹೆಣ್ಣಿನ ಮನೆಗೆ ಹೋಗ್ವು ಕುಸಿ ಸೇರಿ ಉಂಬಕೆ ತುಂಬಾ ರುಚಿ ಆತ್. ಮದ್ವೆಲಿ ಹಾಕಿದ ಬಿಳಿ ಮುಂಡು ಮತ್ತೆ ಬಿಳಿ ಕುಡ್ತನ ಸುತ್ತಿದ ಬಟ್ಟೆ ಗಂಟ್‌ಂದ ಬುಡ್ಸಿ ಹಾಕಿಕಾಂತ್. ಬೈರಾಸ್ ಒಂದರ ಹೆಗ್ಲಿಗೆ ಹಾಕಿ ಅವ್ವ ಕಾಸಿಸಿದ ಹರ್ಲೆಣ್ಣೆನ ತಲೆಗೆ ಹಾಕಿ ಕೈಯಿಂದ ಸರಿಮಾಡಿ ಬೆಚ್ಚಂಗೆ ಬೆಸೆಗೆಲಿ ಮಡ್ಸಿ ಇಸಿದ ಕಿಡಿಂಜೋಳ್‌ನ ಹಾಂಗೆ ಕಿಂಕಿನಡಿಲಿ ಇಸಿಕೆಂಡ್ ಗುಂಡ ಅವ್ವನೊಟ್ಟಿಗೆ ಹೇಳಿ ಹೊರ್ಟ್ತ್.

ದಾರಿ ಉದ್ಕಕ್ಕೂ ಹೆಣ್ಣ್‌ನ ನೆನ್ಸಿಕ್‌ಂಡ್ ಹೋತ್. ನನ್ನಂದ ಅದುವೆ ಗಟ್ಟಿಗೆತ್ತಿ. ನಂಗೆ ಇನ್ನ್ ನಾಚಿಕೆ ಬುಟ್ಟತ್ತ್‌ಲೆಂತ ಮೊರೆ ಕೆಂಪು ಮಾಡಿಕಾಂತ್. ಅತ್ತೆ ಮನೆಗೆ ಇನ್ನ್ ಅರ್ಧ ಪರ್ಲಾಂಗ ಉಟ್ಟು ತೇಳ್ಕ್‌ನ ಮಳೆ ಶುರುಮಾಡ್ತ್. ಕೆಂಡ್ಜೋಳ್ ತಂದದ್‌ಕೆ ಸಾರ್ಥಕ ಅತ್‌ಂತ ಕಿಂಕಿನಡೀಂದ ತೆಗ್ದ್ ಮೈಗೆ ಹಾಕಾಂತ್. ಮಳೆ ಕತ್ತಲೆ ಮತ್ತು ಈ ಕತ್ತಲೆ ಸೇರಿ ದಾರಿ ಮಯ ಮಯ ಕಾಂಬತ್ತಿತ್. ಹಕ್ಕಲೆನ ಮನೆಗಳ್‌ಂದ ನಾಯಿಗ ಬೊಗುಳುತ್ತಿದ್ದೊ. ಅಂತೂ ತಬ್ಬರ್ಸಿಕ್‌ಂಡ್ ಅಳಿಯ ಅತ್ತೆ ಮನೆನ ಜಾಲಿಗೆ ಬಂದಾತ್. ಬೊಗ್ಗಿ ನಾಯಿ ಒಮ್ಮೆಗೆ ಚೆಲ್ ಹೆಡೆಗೆಂದ ಬೊಗಳಿಕ್‌ಂಡ್ ಗುಂಡನ ಮೇಲೆ ಬಾತ್. ಹೆಣ್ಣ್ ಬಾಗಿಲ್‌ಲೇ ಇದ್ದದರಿಂದ ಜೋರ್ ಮಾಡಿ ಸುಮ್ಮನಾತ್. ಬೊಗ್ಗಿಗೆ ಸ್ವರ ಕೇಳಿ ಹಞ ಗೊತ್ತಾದಾಂಗೆ ಆಗಿ ಬಾಲ ಅಲ್ಲಾಡಿಸಿ ಹೋಗಿ ಹೆಡೆಗೆಲಿ ಸುಂರ್ಟಿತ್. ಹೆಣ್ಣ್ ಜಾನಕಿ ದಾರಿ ಕಾಯ್ತಿತ್ ಅಂತ ಅದರ ಕಣ್ಣ್ ದೀಪದ ಬೆಳ್ಕ್‌ಲಿ ಹೇಳ್ತಿತ್. ಅತ್ತೆ ಹಿತ್ತಾಳೆ ಚೊಂಬುಲಿ ನೀರ್ ಹಿಡ್ದ್ ನಿಂತಿದ್ದೊ. ಗುಂಡ ನೀರ್ ತಕ್ಕಂಡ್ ಮನೆ ಮಾಡ್ ತಾಗದಾಂಗೆ ಬೊಗ್ಗಿ ಒಳ ಹೊಕ್ಕು ಅಲ್ಲೆ ಇದ್ದ ಮಣ್ಣ್‌ನ ಚಿಂಟೇಲಿ ಕುದ್ಕ್‌ತ್. ಹಞ ಹೊತ್ತ್‌ಲಿ ಅತ್ತೆ ಒಂದು ಪಾಟೇಲಿ, ಬಿಸಿ ಬಿಸಿ ಕಣ್ಣ ಚಾ ಮತ್ತೆ ಚಿಬುಳಿಲಿ ಬೆಯ್ಸಿದ ಗೆಳ್ಸ್‌ನ ತಂದ್ ಇಸಿದೊ. ಜೋರಾಗಿ ಮಳೆ ಹೊಯ್ತಿತ್ತಿದ್ದರಿಂದ ಚೂರು ಚಳಿನೂ ಆಗ್ತಿತ್. ಬಿಸಿ ಚಾನ ಕುಪ್ಪಿಗ್ಲಾಸ್‌ಲಿ ಕುಡ್ಕಂಡ್ ಕೈಯಿಂದ ಗೆಳ್ಸ್ ಚೊಲ್ಲುತ್ತಿತ್ ಗುಂಡ. ಅಷ್ಟೊತ್ತಿಗೆ ಬಾವನೋವು ಒಳಗೆ ಚಾ ಕುಡಿತ್ತಿದ್ದೊವು ಬಂದ್ ಬಾವನೊಟ್ಟಿಗೆ ಏನ್ ಅಂತ ಕೇಳಿ ಸೌಖ್ಯನ ವಿಚಾರಿಸಿದೊ. ಹಞ ಹೊತ್ತ್ ಮಾತಾಡ್‌ದ ಮೇಲೆ ಸಣ್ಣ ಬಾವನೊಟ್ಟಿಗೆ ಗುಂಡ ಮಿೂಯಕೆ ನೀರ್‌ಡಿಗೆ ಹೋತ್. ಮಣ್ಣಿನ ಮಂಡೇಲಿ ಬಿಸಿ ನೀರ್ ಲಾಯಿಕ್ ಕಾದ್‌ಕಂಡ್ ಇತ್ತ್. ಬೆದ್‌ರ್‌ನ ಒಣ್‌ಕ್‌ಲಿ ತಲೆ ಮೇಲೆ ಕುಷಿಯಾದಷ್ಟು ನೀರು ಹೊಯ್ಕಂಡ್ ಕಂಬಕ್ಕೆ ಕಟ್ಟಿದ ಚಿಪ್ಪಿಲಿ ಸೀಗೆ ಹೋಡಿನ್ ಇತ್ತ್. ತಲೆಗೆ ಮೈಗೆ ಹಾಕಿ, ಹೀರೆಕಾಯಿ

ಚೆಪ್ಪುಂದ ಲಾಯಿಕ್ ಒರ್ಸಿಕಾಂತ್. ಬಾವ ಕೊಟ್ಟ ಬೈರಾಸ್‌ಲಿ ತಲೆ ಮೈ ಒರ್ಸಿಕಂಡ್ ಮಿಾಯಕೆ ಮುಂದೆ ಒಗ್ಟ್ ಹಾಕಿದ ಕೆಂಪು ಚಾಕುಳಿ ಕೋಮಣನ ಕಿಚ್ಚಿ ಎದುರ್ ಹಿಡ್ದ್, ಓಣ್‌ಗಿಸ್‌ಕಾಂತ್. ಅಷ್ಟೊತ್ತಿಗೆ ಬಾವಂದ್ ಕೂಡಾ ಮಿಾದ್ ಆತ್. ಒಳಗೆ ಬಂದ್ ಹೆಣ್ಣ್ ತೋರ್ಸಿದ ದೇವರ ಪೋಟೋಕೆ ಕೈ ಮುಗ್ದ್ ಬಸ್ಮ ಹಣೆಗೆ ಹಾಕಾಂತ್.

ಅತ್ತೆ ಊಟಕ್ಕೆ ನೀರ್ ಹಿಂಡ್ಕಂಡ್ ಚೆಂಬುಲಿ ಅಳಿಯಂಗೆ ಕೊಟ್ಟ, ಬಾವಂದರೊಟ್ಟಿಗೆ ಗುಂಡ ಊಟಕ್ಕೆ ಕುದ್ದತ್. ಅತ್ತೆನೊಟ್ಟಿಗೆ ಹೆಣ್ಣ್‌ನೂ ಬಳ್ಸಿಕೆ ಶುರುಮಾಡ್ತ್. ಹುಗ್ಗಿಗೆ ಸೋಂತೆಕಾಯಿ, ಹಲಸಿನಕ್ಕಿ ಆಂಬರ ಮತ್ತೆ ಹಲಸಿನ ಬೀಜಕ್ಕೆ ಕಾಡ್ ಹಂದಿ ಉಪ್ಪಣ ಹಾಕಿ ಆರ್ಸಿದ್ ಇತ್ತ್. ಲಾಯಿಕ್ ಊಟ ಮಾಡ್ತ್. ಆಮೇಲೆ ಹೊಸ ನೆಂಟ್ರಿಗಾಗಿ ಹೆಣ್ಣ್ ಜಾನಕಿ ಬಿಸಿ ಬಿಸಿ ಪಾಯಸ ತಂದ್ ಚೆಟ್ಟೆಗೆ ಹಾಕಿತ್. ಪಾಯ್ಸ ಬಾರಿ ರುಚಿ ಇತ್ತ್. ಗುಂಡ ನಾಚಿಕೆ ಮಾಡದೆ ಐದಾರ್ ಚಿಪ್ಪಿನ ಸೆಡೆಲಿ ಬಳ್ಸಿಸಿಕಾಂತ್. ಆದ್ರು ಗುಂಡಗೆ ತೃಪ್ತಿ ಆತ್‌ಲೆ. ಮತ್ತೆ ಕೇಳಿಕೆ ಚೂರು ನಾಚಿಕೆ ಆಗಿ, ಸಾಕುಂತ ಊಟ ಮಾಡಿ ಎಲ್ಲವೂ ಎದ್ದೊ. ಊಟ ಆದ ಕೂಡ್ಲೆ ಬಾವಂದರೊಟ್ಟಿಗೆ ಸೇರಿಕಂಡ್ ಬೆತ್ತದ ಕುಕ್ಕೆಲಿ ಇದ್ದ ಎಲೆ ಅಡಿಕೆ ತಿಂದೋ ಉಗ್ಯಕೆ ಬೆದ್ರ್‌ಂದ ಮಾಡ್ದ ಮಡೆಗುತ್ತಿ ಕೊಟ್ಟೊ, ಅದ್ಕೆ ಹಿಡ್‌ಕಂಬಕ್ಕೆ ಒಂದು ಕೋಲ್‌ನಾಂಗೆ ಇತ್ತ್.

ಎಲ್ಲವೂ ಮಲ್ಗವ ಹೊತ್ತಾತ್. ಹೆಣ್ಣ್ ಬೆದ್ರ್‌ನ ಚೆದ್ದಲೆಲಿ ಕಟ್ಟಿದ ಒಂದು ಕೋಣೆಗೆ ಮಲ್ಗಿಕೆ ಕರ್ತ್. ಗುಂಡ ಹೆಣ್ಣ್‌ನ ಹಕ್ಕಲೆ ನಾಚಿಕಂಡ್ ಮಲ್ಗಿತ್. ಆದ್ರು ಅಂವ ಉಂಡ ಪಾಯ್ಸ ಎಂತರ್‌ದ್‌ತಾ ಗೊತ್ತಾಗದೆ ಈಗ ಹೆಣ್ಣ್‌ನೊಟ್ಟಿಗೆ ಮೆಲ್ಲ ಕೇಳ್ತ್. ನೀ ಬಡ್ಸಿದ ಪಾಯ್ಸ ಬಾರಿ ಲಾಯಿಕಿತ್ತ್‌ಯಾ. ಅದ್ ಎಂತರ್‌ದ್‌ಂತ. ಅಯ್ಯೋ ಅದು ಗೊತ್ತಾತಿಲೆನಾ? ಅದು ಇಂದೆನಿ ಇದರ್‌ಂದಂತ, ಬೆದ್‌ರ್‌ಂದ, ಹೆಣ್ಣ್ ಮಲ್ಗಿದ ತನ್ನ ಹಕ್ಕಲ್ಲಿದ್ದ ಬೆದ್ರ್‌ರ್‌ನ ಚೆದ್ದಲೆನ ಬೊಟ್ಟ ತೋರ್ಸಿತ್. ಗುಂಡಂಗೆ ನಂಬಿಕೆ ಆತ್‌ಲೆ. ಈ ಬೆದ್ರ್‌ಂದ ಅಷ್ಟ್ ರುಚಿನ ಪಾಯಸನೇ ಅಂತ ಯೋಚಿಸಿಕಂಡೇ ಮಲ್ಗಿತ್.

ಬೊಳ್ಪಿಗೆ ಕೋಳಿ ಕೂಂಗಿಕೆ ಮುಂದೆ ಎದ್ದ್ ಚಾ ರೆಡಿ ಮಾಡೋಕು. ಮತ್ತೆ ಅತ್ತೆ ಮಾತ್ರ ಮನೇಲಿ ಒಳದ್. ಬೇಗ ಹೋಕುತ ಇವು ಹೇಳ್ಯೋಳಂತ ಗ್ರಹಿಸಿಕಂಡ್ ಗಂಡನ ಕಡೆ ತಿರ್ಗಿ ನೋಡಿರೆ ಗಂಡ ಅಲ್ಲಿತ್ಲೆ! ಉಚ್ಚೆ ಹೋಯಕೆ ಹೋದನೋ? ಯಾಕೆ ಕರ್ತ್‌ಲೆ, ಕರ್ದರೆ ದೀಪ ಹೋಸಿ ಕೊಡ್ತಿದ್ದೆಲ್ಲ? ಅಂತ ಯೋಚಿಸಿದ ಜಾನಕಿ ಎದ್ದ್ ಕುದ್ದತ್. ಉಚ್ಚೆ ಹೊಯಕೆ ಎಲ್ಲಿಗೆ ಹೋದಪ್ಪಾ? ಆ ಬೊಗ್ಗಿ ನಾಯಿಗೆ ಯಾರ ಗುರ್ತ್ ಇಲ್ಲೆ. ಸುಮ್ಮನೆ ಕಚ್ಚಿಕಾಗದಲ್ಲಂತ ನೀರೊಡಿ

ಕೊಟೆಗೆ ಹತ್ರ ಹೋದರೆ ಅಲ್ಲಿ ಗುಂಡ ಇತ್ತ್‌ಲೆ. ಹಾಂಗೆ ಒಳಗೆ ತಿರ್‍ಗಿ ನೋಡ್‌ಕನ ಮನೆನ ಒಂದು ಭಾಗಲಿ ಕಟ್ಟಿದ ಚದ್ದಲೆ ಅರ್ಧ ಕಾಂಬೊದುಲೆ. ಅರೆ ಇವು ಎಲ್ಲಿಗೆ ಹೋದ್ದೋ? ಈ ಚದ್ದಲೆ ಯಾಕೆ ಬಿಚ್ಚಿದ್ದೊ? ಜಾನಕಿಗೆ ಯಾಕೋ ಹೆದಿರ್‌ಕೆ ಆಗಿ ಅಣ್ಣಂದರ ಕರ್‍ತ್. ಎಲ್ಲವೂ ಎದ್ದ್ ಕುದ್ದ್ ಹುಡ್ಕಿದ್ದೊ, ಕರ್‍ದ್ದೊ. ಎಲ್ಲಿ ಸುದ್ದಿಯೇ ಇಲ್ಲೆ. ಬಾವ ಇಷ್ಟೂ ಕೋಪಲಿ ಯಾಕೆ ಹೋದ್ದೊ? ಅಲ್ಲ ಈ ಚದ್ದಲೆ ಏನಾತ್ ಒಂದೂ ಅರ್ಥ ಆದುಲೆಲ್ಲಂತಾ ಯೋಚನೆ ಮಾಡಿ ಬಾವಂದರಿಬ್ಬರೂ, ಬಾವನ ಹುಡ್ಕ್ಯಂಡ್ ಅವರ ಮನೆ ಕಡೆ ಹೊರ್‍ಟ್ಟೊ. ದೈರ್ಯಕೆ ಅಲ್ಲಿದ್ದ ಅಟ್ಟಲಿ ತೂಗಿ ಹಾಕಿದ ಕೇಪುನ ಬೆಡಿನೂ ಹೆಗ್‌ಲಿಗಿಸಿಕೊಂಡ. ಇತ್ತ ಹೆಣ್ಣ್, ಅತ್ತೆ ಬೇಜಾರ್‌ಲಿ ಕಣ್ಣ್‌ನೀರ್‌ನ ಸೆರ್‌ಂಗ್‌ಲಿ ಒರ್‍ಸಿಕಾಂತಿದ್ದೊ.

ಗುಂಡ ಚೆದ್ದಲೆನ ಮನೆಗೆ ತಂದ್ ಅವ್ವನೊಟ್ಟಿಗೆ ಹೇಳಿಕ್‌ಂಡ್ ತೆರಿ ಕುದೆಂಟೀಲಿ ಸಣ್ಣಗೆ ಕಡ್‌ಪತ್ತೀಲಿ ತೆರಿಯಕ್ಕೆ ಕುದ್ದುಟ್ಟು. ನೀನು ತಿಂದ್ ನೋಡಾಕಾತ್ ಅವ್ವ ಪಾಯಸ ಎಷ್ಟ್ ಲಾಯಿಕ್ ಗೊತ್ತುಟಾಂತ. ಅಷ್ಟೊತ್ತಿಗೆ ಬಾವಂದಿರ್ ಬೆಡಿ ಸಮೇತ ಇವನ ಎದುರಿಗೆ ಬಂದು ನಿಂತ್ತೊ. ಗುಂಡ ಕುದ್ದಲ್ಲಿಂದ ರಪ್ಪ ಎದ್ದ್ ನಿತ್ತತ್. ಸರ್ವ ತಪ್ಪಾತಾಂತ ಹೇಳಿಕಾಂತ್. ಬಾವಂದರೆ ಕೇಳ್ದೊ ಇದ್ ಎಂತಕೆ ಬಾವಾಂತ. ಏನಿಲ್ಲೆ ಬಾವ ನಿನ್ನೆ ನಿಮ್ಮಲ್ಲಿ ಮಾಡ್ದ ಪಾಯಸ ತುಂಬಾ ರುಚಿ ಆಗಿತ್. ನಂಗೆ ಮತ್ತೆ ಸಹ ಬೇಕಿತ್. ಆದ್ರೆ ಕೇಳಿಕೆ ನಾಚಿಕೆ ಆತ್. ರಾತ್ರೆ ಮಲ್ಗಿಕಾಕನ ಜಾನಕಿನೊಟ್ಟಿಗೆ ಕೇಳ್‌ಕನ ಅದು ಈ ಬೆದ್ರ್‌ಂದ ಮಾಡ್ದ್‌ಂತ ಹೇಳ್ತ್. ಹಾಂಗೆ ನಿಮ್ಮೊಟ್ಟಿಗೆ ಕೇಳದೆ ಚದ್ದಲೆನ ತಂದೆಂತ ಹೇಳ್ತ್ ಗುಂಡ. ಬಾವಂದಿರಿಗೆ ಪರಿಸ್ಥಿತಿ ಅರ್ಥ ಆತ್. ಮೊರೆ-ಮೊರೆ ನೋಡಿ ನಗಾಡಿಕಂಡ. ವೋ ನೀವು ಹೇಳಿರೆ ನಾವೇ ತಂದು ಕೊಡ್ತಿದ್ದಲ್ಲಾ! ಅದು ಇದರ್‌ದ್ದಲ್ಲ ಬಾವ. ಇದು ಒಣಗಿದ ಚೆದ್ದಲೆ, ಅದು ಇದರ ಕಣಲೆಂದ ಮಾಡ್ದ ಪಾಯಸ್ಸ. ಅದರ ಹಸಿ ಹಸಿಯಾಗಿರ್‍ಕನ ಸಣ್ಣ ಕೊಯ್ದ್ ಮಾಡೋಕೂಂತ ವಿವರ್‍ಸಿದ್ದೊ. ಗುಂಡ ಮುಂದೇನೆ ನಾಚಿಕೆ ಜಾಸ್ತಿ. ಈಗಂತೂ ನಾಚಿ ಮುದ್ದೆ ಆತ್. ಬಾವಂದರ್ ಸಬೂಬು ಹೇಳಿ ತಂಗೆನ ಬಂದ್ ಕರ್‍ಕೊಂಡು ಹೋಗಿಂತ ಕರ್‍ದ್ದೊ. ಹೀಂಗೆ ಗುಂಡ ಬೆದ್ರ್‌ನ ಪಾಯಸಕ್ಕೆ ಬೇಕಾಗಿ ಅತ್ತೆ ಮನೆನ ಅರ್ಧ ಮಾಡ್ತ್‌ಂತ ಊರೋವು ಹೇಳಿ ನಗಾಡ್ತ ಇದ್ದೊ.

* * * * *



# ಮರದ ಚೆಟ್ಟೆ

ಒಂದು ಊರುಲಿ ಒಂದು ಅಜ್ಜಿ ಇದ್ದದೆ, ಅದ್ಕೆ ನನ್ನವುಂತೇಳಿ ಯಾರು ಇರ್ದುಲೆ, ಕಾಡ್ ಕರೇಲಿ ಒಂದು ಸಣ್ಣ ಜೊಂಪಡಿಲಿ ಅದ್ ಬದ್ಕಿಕ್ಂಡ್ ಇದ್ದದೆ. ಜೀವನಕ್ಕೆ ದಿನಾ ಕಾಡಿಗೆ ಹೋಗಿ ಸೌದೆ ತಾದು ಅದರ ಮಾರಿ ಬಂದ ದುಡ್ಡುಲಿ ಗಂಜಿ –ತೆಳಿಂತ ಕುಡ್ಕಂಡ್ ಇದ್ದದೆ. ಹೀಂಗೆ ಒಂದು ದಿನ ಕಾಡ್‌ಲಿ ಸೌದೆ ಹುಡ್ಕಿಕ್ಂಡ್ ಹೋಕ್ಯಾಕನ ಒಂದು ಮರದ ಬುಡಲಿ ಒಂದು ಪೆಟ್ಟಿಗೆನಾಂಗೆ ಇರುವ ಮರದ ಚೆಟ್ಟೆ ಸಿಕ್ಕಿದೆ. ನೋಡಿಕೆ ಪೊರ್ಲುಟ್ಟು; ಇದರ ಕಾಡ್‌ಲಿ ಯಾಕೆ ಬುಡ್ದುಂತ ಅಜ್ಜಿ ಮನೆಗೆ ತಕ್ಕ್ಂಡ್ ಬಂದ್ ಒಂದು ಮೂಲೇಲಿ ಇಸಿದೆ. ಆ ಪಟ್ಟಿಗೆ ಅದರಷ್ಟಕ್ಕೆ ಆ ಮೂಲೇಲಿ ಇದ್ದದೆ. ಅಜ್ಜಿ ಮಾತ್ರ ದಿನೋಳು ಯಾಗೋಳ್‌ನಾಂಗೆ ಕಾಡಿಗೆ ಹೋದೆ. ಆದ್ರೆ ಮನೆಗೆ ಬಾಕ್ಯಾಕನ ಮನೆ ಎಲ್ಲಾ ಯಾಗೋಳ್‌ನಾಂಗೆ ಇರ್ದುಲೆ. ಮನೆ ಎಲ್ಲಾ ಗುಡ್ಸಿ, ಸೆಗಣಿ ಹಾಕಿ, ಚೊಂಬು ಪಾತ್ರೆಗೆಲ್ಲ ತೊಳ್ದ್, ಪಳ – ಪಳಾಂತ ಹೊಳ್ದದೆ, ಮನೇಲಿ ಗಂಜಿ ಗೈಪು ಎಲ್ಲಾ ಯಾರೋ ಮಾಡಿ ಇಸಿವೆ. ಅಜ್ಜಿನ ಬಟ್ಟೆ – ಬರೆ ಎಲ್ಲಾ ಯಾರೋ ಒಗ್ದ್ ಹಾಕಿ ಒಣಗಿಸಿ ಇಸಿವೆ. ಮನೇಲಿದ್ದ ಮಂಡೇಲಿ ಎಲ್ಲಾ ನೀರ್ ತುಂಬಿಸಿ

ಇಸುವೆ. ಅಜ್ಜಿಗೆ ಆಶ್ಚರ್ಯ ಆದೆ. ಇದ್ ಯಾರ್ ಮಾಡ್ದ್‌ಂತ ಯೋಚನೆ ಮಾಡ್ತ ಇದ್ದದೆ. ಅಜ್ಜಿ ತಂದ್ ಇಸಿದ ಆ ಮರದ ಚೆಟ್ಟೆಲಿ ಒಂದು ಲಾಯಿಕ್‌ನ ರಾಣಿನಾಂಗಿದ್ದ ಗೂಡೆ ಇದ್ದದೆ. ಅದ್ ದೇವರ ಶಾಪಲಿ ಮರದ ಚೆಟ್ಟೆ ಒಳಗೆ ಇದ್ದದ್. ಈ ಅಜ್ಜಿ ತಂದ್ ಮನೇಲಿ ಇಸಿದ ಮೇಲೆ ಅಜ್ಜಿನ ಕಷ್ಟ ನೋಡಿ ಈ ಚೆಟ್ಟೆ ರಾಣಿ ಈ ಎಲ್ಲಾ ಕೆಲ್ಸನ ಮಾಡ್ದೆ. ಕತ್ತಲೆಗೆ ಅಜ್ಜಿ ಮಲ್ಗಿದ ಮೇಲೆ ಸಹ ಈ ಗೂಡೆ ಮೆಲ್ಲ ಮರದ ಚೆಟ್ಟೆಂದ ಹೊರಗೆ ಬಂದ್ ಬಾಮಿಂದ ನೀರೆಳೆದು. ಜಾಲ್ ಗುಡ್ಸುದು ಎಲ್ಲಾ ಮಾಡ್ದೆ. ಈ ಅಜ್ಜಿಗೆ ಇದೇ ಯೋಚನೆಲಿ ಒಂದು ದಿನ ನಿದ್ದೆ ಬಾದುಲೆ. ಮೆಲ್ಲ ಎದ್ದ್ ಕುದ್ದದೆ ಹಾಂಗೆ ಬಾಮಿ ಹಕ್ಕಲೆ ನೋಡಿರೆ ಬಾರೀ ಪೊರ್ಲುನ ಒಂದು ಗೂಡೆ ನೀರೆಳೆದು ಕಂಡದೆ. ನೋಡಿರೆ ಕೊಂಡಾಟ ಆದೆ. ಹಕ್ಕಲೆ ಹೋಗಿ ಅದರ ಮುಟ್ಟಮೋಂತ ಆದೆ. ಆದ್ರೆ ಹಾಂಗೆ ಹೋಕೆ ಅಜ್ಜಿಗೆ ಹಂಞ ಹೆದ್ರಿಕೆನೂ ಆದೆ. ಯಾರಿರ್ದು ಈ ಕೂಸು?. ಹೋಗಿ ಕೇಳಿರೆ ಹೇಂಗೆಂತ ಯೋಚನೆ ಮಾಡ್ದೆ, ಮತ್ತೆ ಬೇಡ, ಯಾರು ಇಲ್ಲದ ನಂಗೆ ದೇವರೇ ಕಳ್ಸಿದ್. ಈಗ ನಾ ಸುಖವಾಗಿ ಒಳೆ ಅಲ್ಲಾ. ಹೋಗಿ ಮಾತಾಡ್ಸಿ ಆಕನ ಅದ್ ಎಲ್ಲಾರ್ ಮಾಯ ಆದರೆ, ಈಗ ನಂಗೆ ಸಿಕ್ಕುವ ಸುಖನೂ ಇಲ್ಲದಾಂಗೆ ಆದು. ನೋಡೊಮೋ ಒಂದಲ್ಲ ಒಂದು ದಿನ ಅದ್ ನನ್ನ ಮಾತಾಡ್ಸಿಯೇ ಮಾತಾಡ್ಸುದುಂತ ಅಜ್ಜಿ ನೋಡಿ ಸುಮ್ಮನೆ ಮಲ್ಗಿದೆ.

ಒಂದು ದಿನ ಹೀಂಗೆ ಅಜ್ಜಿ ಸೌದೆ ತಾಕೆ ಕಾಡಿಗೆ ಹೋದ ಮೇಲೆ ಈ ಚೆಟ್ಟೆ ರಾಣಿ ಪೆಟ್ಟಿಗೆಂದ ಹೊರಗೆ ಬಂದ್ ದಿನದ ಕೆಲ್ಸ ಮಾಡಿಕ್‌ಂಡ್ ಇದ್ದದೆ. ಬಾಮಿಂದ ನೀರೆಳೆಕೆಂತ ತಾಮ್ರದ ಕೊಡ್ಪಾನನ ಸೊಂಟಲಿಸಿಕ್‌ಂಡ್ ಬಾಮಿ ಕರೆಗೆ ಹೋದೆ. ಹೀಂಗೆ ಹೋಕ್ಯಾಕನ ಆ ಊರ್‌ನ ರಾಜಕುಮಾರ ಈ ಗೂಡೆನ ನೋಡ್ದೆ. ಅವಂಗೆ ಇದರ ನೋಡ್ಯಾಕಾನ ಮದುವೆ ಆದರೆ ಇದೇ ಗೂಡೆನ ಆಕುಂತ ಆಶೆ ಆದೆ. ಆದ್ರೆ ಈ ಗೂಡೆ ಯಾರಾಗಿರ್ದು? ಇಷ್ಟರವರೇಗೆ ಇದರ ನೋಡಿದಿಲ್ಲೆಂತ ಯೋಚನೆ ಮಾಡ್ದೆ. ಯಾರೋ ಅಜ್ಜಿನ ಸಂಬಂಧಿಕರಿರ್ದುಂತ ಸುಮ್ಮನಾಗಿ ಆ ಗೂಡೆನ ಮಾತಾಡ್ಸಿಕೆ ಹೊರ್ಟದೆ. ಹಕ್ಕಲೆ ಹೋಗಿ ಕೇಳ್ದೆ ನೀ ಯಾರ್? ನಿನ್ನ ಅಪ್ಪ – ಅಮ್ಮ ಯಾರ್ ನಿನ್ನ ಊರು ಎಲ್ಲಿಂತ ಎಲ್ಲ ಕೇಳ್ದೆ. ಅದ್ಕೆ ಗೂಡೆ ನಂಗೆ ಅಪ್ಪ – ಅಮ್ಮ ಯಾರ್ ಇಲ್ಲೆ. ನಾ ಒಬ್ಬ ಅನಾಥೆ ಸಣ್ಣದರ್ಲೇ ನಾ ಕಾಡ್‌ಲಿ ಬೆಳ್ದ್‌ದ್. ಈಗ ಅಜ್ಜಿ ನನ್ನ ಕರ್ಕ್ಂಡ್ ಬಂದ್ ಸಾಂಕ್‌ತಾ ಒಳದ್‌ಂತ ಹೇಳ್ದೆ. ಅದ್ಕೆ ರಾಜಕುಮಾರ್ ನೀ ಏನೂ ಯೋಚನೆ ಮಾಡ್ಬಡ. ನಾ

ಈ ಊರುನ ರಾಜಕುಮಾರ ನಿನ್ನ ನೋಡಿ ನಂಗೆ ಬಾರೀ ಕುಷಿ ಆತ್. ನಾ ಮದುವೆ ಆದಿದ್ದರೆ ನಿನ್ನನ್ನೇ ಆಕುಂತ ನಿರ್ಧಾರ ಮಾಡ್ಯೋಳೆಂತ ಹೇಳ್ದೆ. ಅದ್ಕೆ ಚೆಟ್ಟೆ ರಾಣಿ ಹೇಳ್ದೆ ನೀ ನನ್ನ ಮದುವೆ ಆದರೆ ನಿಂಗೆ ಏನೂ ಸುಖ ಸಿಕ್ಕಿಕಿಲೆ ನಾ ಕತ್ತಲಾದಂಗೆ ನಿಂಗೆ ಕಾಣದಾಂಗೆ ಆವೆ. ಹಾಂಗಾಗಿ ನೀ ಬೇರೆ ಯಾರನ್ನಾದರ್ ಮದುವೆ ಅಗುಂತ ಹೇಳ್ದೆ. ಅದಕೆ ರಾಜಕುಮಾರ ಒಪ್ಪುದುಲೆ ನಾ ಮದುವೆ ಆದುದಾದರೆ ನಿನ್ನನೇಂತ ಹೇಳಿ ಈ ವಿಷಯ ನಿನ್ನ ಅಜ್ಜಿನೊಟ್ಟಿಗೆ ಮಾತಾಡಿನೆಂತ ಅಲ್ಲಿಂದ ಹೋರ್ಟು ಹೋದೆ.

ಒಂದು ದಿನ ಅಜ್ಜಿ ಬರುವ ಹೊತ್ತಿಗೆ ರಾಜಕುಮಾರ ಅವನ ಕುದುರೆ ಮೇಲೆ ಅಜ್ಜಿನ ಮನೆಗೆ ಬಂದ್ ಅಂವ ಗೂಡೆ ನೋಡ್ದರ ವಿಷಯ ಮತ್ತೆ ನಾ ಅದರ ಮದುವೆ ಆಗುದರ ಬಗ್ಗೆ ಮಾತಾಡ್ದೆ. ಅಜ್ಜಿಗೆ ಏನು ಹೇಳೋಕುಂತ ಗೊತ್ತಾದ್ಲೆ. ಆ ಊರುನ ರಾಜಕುಮಾರ ಕೇಳಿಟುಂತಾದರೆ ಅಜ್ಜಿ ಏನೂ ಮಾತಾಡ್ವಂಗೆ ಇಲ್ಲೆ. ಒಂದು ಕಡೆಂದ ಅಜ್ಜಿಗೆ ಕುಷಿ ಆತ್. ಬಹುಶಃ ನನ್ನ ಮನೇಂದ ಈ ಕೂಸುನ ಮದುವೆ ಆದ್ರೆ ನಂಗೆ ಕಷ್ಟಗಳೆಲ್ಲಾ ಹೋದಾಂಗೆತೇಳಿ. ಅಜ್ಜಿ ಮುಂದೇನೆ ಒಂದು ದಿನ ಕತ್ತಲೆಗೆ ನೋಡ್ದ ಈ ರಾಣಿನ ಮದುವೆ ಮಾಡಿ ಕೊಡಿಕೆ ಒಪ್ಪಿದೆ. ಆದ್ರೆ ಆ ಗೂಡೆ ಎಲ್ಲಿಟ್ಟು ಈಗಂತ ಕೇಳ್ರೆ, ಆಗ ಅಜ್ಜಿ ಆ ಮೂಲೆಲಿದ್ದ ಮರದ ಪೆಟ್ಟಿಗೆನ ಮೆಲ್ಲ ತೋರ್ಸಿದೆ. ಅದ್ ಅಲ್ಲಿಯೇ ಇರ್ದು. ನಂಗೆ ಕೂಡಾ ಕಾಂಬಕೆ ಸಿಕ್ಕುದುಲೆ, ಅದ್ರೆ ಅದ್ಕೆ ಬೇಕಾಕನ ಹೊರಗೆ ಬಂದದೆ. ಪಾಪ ಕೂಸು ನನ್ನ ಎಲ್ಲ ಕೆಲ್ಸನ ಮಾಡಿ ಅದರೊಳಗೆ ಹೋದೆ. ಇಲ್ಲಿವರೇಗೆ ನಾ ಅದರೊಟ್ಟಿಗೆ ಮಾತಾಡ್ಲಿತ್ತಿಲೆ. ಅದ್ರೆ ದಿಕ್ಕ್-ದೆಸೆ ಇಲ್ಲದವಂಗೆ ಅದ್ ನಂಗೆ ದೇವ್ರು ಕೊಟ್ಟ ಕೂಸುಂತ ಅಜ್ಜಿ ಕಥೆ ಹೇಳ್ದೆ. ಓ ಅಂದರೆ ಇದ್ ಸಾಮಾನ್ಯ ಗೂಡೆ ಅಲ್ಲ. ಇದರ ಹಿಂದೆ ಏನಾರ್ ಬೇರೆ ಕಥೆ ಇರ್ದು ಏನೇ ಅಗಲಿ ಅದರ ನಾ ಮಾತ್ರ ಬುಟ್ಟು ಹೋಕಿಲೆಂತ ತೀರ್ಮಾನ ಮಾಡ್ದೆ. ಅದೇ ರೀತಿ ಊರ್‌ಲಿ ಎಲ್ಲ ಡಂಗೂರ ಸಾರ್ಸಿ ಆ ಗೂಡೆನ ಮದುವೆ ಆಕೆ ಏರ್ಪಾಡ್ ಮಾಡ್ದೆ. ಹಾಂಗೆ ಒಂದು ದಿನ ಆ ರಾಣಿ ಮರಂದ ಹೊರಗೆ ಬರುವ ಹೊತ್ತಿಗೆ ಅಜ್ಜಿ ಮಾತಾಡ್ದೆ. ಅದರ ಮುಟ್ಟಿ ತಬ್ಬಿ ಹಿಡ್ಕಂಡದೆ. ಬಾರೀ ಕುಷಿಲಿ ರಾಜಕುಮಾರ ಬಂದದ್. ನಿನ್ನ ಮದುವೆ ಆದೆಗಡಾಂತ ಎಲ್ಲಾ ಹೇಳ್ದೆ. ಅದಲ್ಲದೆ ಅಜ್ಜಿನೂ ಕೇಳ್ದೆ ನೀ ಯಾರ್ ಮಂಙ ನನ್ನ ಯಾರ್ ಕಾಡ್‌ಲಿ ಬುಟ್ಟು ಹೋದ್. ನೀ ಯಾರ್‍ಯಾರ್ ದೇವತೆನೋ ಅಂತ ಕೇಳ್ದೆ ಅದ್ಕೆ ಆ ಚೆಟ್ಟೆ ರಾಣಿ ನಾ ಯಾರಾಂತ

ನಂಗೆ ಗೊತ್ತಿಲ್ಲೆ. ಕಾಡ್‌ಲೇ ಇದ್ದೆ. ಅದ್ರೆ ಒಂದು ದಿನ ನೀ ನನ್ನ ಮನೆಗೆ ತಕ್ಕಂಡ್ ಬಂದ ಮೇಲೆ ನಿನ್ನ ಪಿಳ್ಳಿಯಾಗಿ ಒಳೆಂತ ಹೇಳ್ದೆ. ಅಜ್ಜಿಗೆ ಬಾರಿ ಕುಷಿ ಆಗಿ ಮತ್ತೊಮ್ಮೆ ತಬ್ಬಿಕಂಡದೆ, ಅಜ್ಜಿಗೆ ಕಣ್ಣ್‌ಲಿ ನೀರ್ ಬಂದದೆ. ಆದರೆ ನೆತ್ತಿಗೆ ಮುತ್ತ ಕೊಟ್ಟ್, ನೀ ರಾಜಕುಮಾರನ ಮದುವೆ ಆಗ್ ಮಂಞ. ಇಂದ್ - ನಾಳೆಂತ ನಾ ಸತ್ತ್ ಹೋದರೆ ನಿಂಗ್ ಮತ್ತೆ ಯಾರ್‌ಗತೀಂತ ಒಪ್ಪಿಸಿದೆ.

ರಾಜಕುಮಾರನೊಟ್ಟಿಗೆ ಅವನ ಅರಸು ಮನೆತನಂದ ನೂರಾರು ಜನ, ಆನೆ, ಕುದುರೆಲಿ ಬಂದ್ ಈ ಅಜ್ಜಿನ ಮನೆಂದ ಪೊರ್ಲುನ ಗೂಡೆನ ಮದುವೆ ಆಗಿ ಕರ್ಕಂಡ್ ಹೋದವೆ. ಅರಮನೇಲಿ ಊರೊವುಕ್ಕೆಲ್ಲಾ ಗಮ್ಮತ್‌ನ ಊಟ ಎಲ್ಲ ಹಾಕುವೆ, ರಾಜಕುಮಾರಿ ಅರಮನೆ ಸೇರ್ದೆ. ಆದ್ರೆ ಕತ್ತಲಾದಾಂಗೆ ಈ ರಾಣೀ ಆ ಮರದ ಚೆಟ್ಟೆಯಾಗಿ ಮೂಲೇಲಿ ಕುದ್ದದೆ. ಇದರ್‌ಂದಾಗಿ ರಾಜಕುಮಾರಂಗೆ ಬಾರೀ ಬೇಜಾರ್ ಆದೆ ರಾಜಕುಮಾರನ ಒಟ್ಟಿಗೆ ಕೋಣೆಲಿ ಮಲ್ಗಕಾದ ಈ ರಾಣಿ ಕತ್ತಲಾದಾಂಗೆ ಮರದ ಪೆಟ್ಟಿಗೆಯಾಗಿ ಹೋದೆಲ್ಲಂತ ಯೋಚನೆ ಮಾಡ್ದೆ. ಇದ್ಕೆ ಏನ್ ಮಾಡ್ದುಂತ ತಲೆ ಬಿಸಿ ಮಾಡ್ದೆ. ಏನಾರ್ ಒಂದು ಮಾಡಿಯೇ ಮಾಡೋಕೂಂತ ಆ ಮರದ ಚೆಟ್ಟೆ ಹಕ್ಕಲೇನೆ ಅಡಂಗಿ ಕುದ್ದದೆ. ಕತ್ತಲೆ-ಕತ್ತಲೆ ಆಕನ ಆ ರಾಣಿ ಮರದ ಚೆಟ್ಟೆಂದ ಹೊರಗೆ ಬಂದ್ ಮೆಲ್ಲ ಮಿಂಯೇಕೆಂತ ಹೋದೆ. ರಾಜಕುಮಾರ ಇದೇ ಒಳ್ಳೆ ಸಮಯಂತ ಗ್ರಹಿಸಿ, ಅದುದ್ದಾಗಲಿಂತ ಆ ಮರದ ಚೆಟ್ಟೆನ ತಕ್ಕಂಡ್ ಹೋಗಿ ಒಲೆಗೆ ಹಾಕಿದೆ. ರಾಜಕುಮಾರಿ ಮಿಂದ್ ಬಾಕನ ಮರದ ಚೆಟ್ಟೆ ಇರ್ಲುಲೆ. ಆಂದ್‌ಂದ ಮೇಲೆ ಅದ್ಕೆ ಶಾಪ ವಿಮೋಚನೆ ಆದಾಂಗೆ ಆಗಿ, ಆ ಲಾಯಿಕ್‌ನ ರಾಜಕುಮಾರಂಗೆ - ಲ್ಯಾಕ್‌ನ ರಾಜಕುಮಾರಿ ಆಗಿ ಎಲ್ಲವರಾಂಗೆ ಸುಖಲೀ ಜೀವನ ಮಾಡುವೆ.

* * * * *



# ಚಿನ್ನದ ಪೆಟ್ಟಿಗೆ

ಒಂದು ಊರ್ಲಿ ಒಂದು ಅಜ್ಜಿನೂ, ಒಬ್ಬ ಮಂಞನೂ ಇದ್ದವೆ. ಅಯ್ಯೆನೂ ಮಂಞನೂ ಬಾರೀ ಲಾಯಿಕ್‌ನ ಜೀವನ ಮಾಡಿಕೊಂಡ್ ಇದ್ದಾವೆ. ಗದ್ದೆ ಕೆಲ್ಸ ಎಲ್ಲ ಮಾಡಿಕ್‌ಂಡ್ ಗದ್ದೆ ಕೊಯ್ದಾದ ಮೇಲೆ ನೆಟ್ಟಿನೂ ಮಾಡಿಕಂಡ್ ಜೀವನ ಸಾಗಿದೆ, ಹೀಂಗಿರಿಕಾಕನ ಅಜ್ಜಿಗೆ ಪ್ರಾಯನೂ ಆತ್ ಹಾಂಗೆ ಮಂಞನೂ ಮದುವೆ ಆಕೆ ಬೆಳ್ದುಟುಂತ ಯೋಚನೆ ಮಾಡಿ, ನೀ ಒಂದು ಮದುವೆ ಆಗ್ ಮಂಜ. ನಂಗೆ ಇನ್ನ್ ಕೆಲ್ಸ ಮಾಡಿಕೆನೂ ಆದುಲೆ. ಮತ್ತೆ ಮನೆಗೊಂದು ಜನನೂಂತ ಆದೆ. ನಾ ಕಣ್ಣ್ ಮುಚ್ಚಿಕೆ ಮುಂದೆ ನಿಂಗೆ ಎರ್ಡ್ ಅಕ್ಕಿ ಹಾಕಿ ಸತ್ತನೆಂತ ಎಲ್ಲ ಅಜ್ಜಿಕಳಾಂಗೆ ಹೇಳ್ದೆ.

ಮಂಞಂಗೂ ಅಯ್ಯೆ ಹೇಳ್ದ್ ಸರಿಂತ ಕಂಡತ್. ಈ ಬೊಳ್ಳಿಗೆ ಕೋಳಿ ಕೂಂಗುವ ಹೊತ್ತಿಗೆ ಅವ್ವ ಎದ್ದ್ ನರ್ಕೆಂಡ್ - ಬುಕ್ಯೆಂಡ್ ಕೆಲ್ಸ ಮಾಡ್ದರ ನಂಗೇನೂ ನೋಡಿಕಾದುಲೆಂತ ತೀರ್ಮಾನ ಮಾಡಿ. ಅವನ ಸೋದರ ಮಾವನೊಟ್ಟಿಗೆ ಹೇಳಿ ಅವರ ನಂಟ್ರ ಕಡೆಂದ ಒಂದು ಗೂಡೆನ ನೋಡಿ ಮದುವೆ ಆದುಂತ ನಿಘಂಟ್ ಆತ್. ಹಾಂಗೆ ಹೋದು - ಬಾದು ಎಲ್ಲ್ ಆಗಿ ಒಂದು ದಿನ

ದಿಬ್ಬಣ ಹೋಗಿ ಮದುವೆ ಆಗಿ ಗೂಡೆನ ಕರ್‍ಕಂಡ್ ಬಂದೂ ಆತ್. ಬಂದ ಶುರುಲಿ ಅವ್ವನೂ ಹೆಣ್ಣುನೂ ಬಾರೀ ಲಾಯಿಕ್‌ಲಿ ಇದ್ದೋ. ದಿನಾ ಹೋದಾಂಗೆ ನನ್ನ ಅವ್ವನ ಅತ್ತೆಂತ ಕರೆವ ಬದಲ್ ಅಜ್ಜಿಂತ ಕರೆಕೆ ಶುರು ಮಾಡ್ತ್. ಈ ಅಜ್ಜಿ ಇನ್ನ್ ಎಷ್ಟ್ ದಿನ ಬದ್ಕಿದೆ?. ಇದ್ಕೆ ಸಾಯಕೆ ದಿನ ಬಾದುಲೆ ಕಂಡದೆಂತ ಮನ್ಸಲೇ ಹಲ್ಲ್ ಕಡಿಯಕೆ ಶುರುಮಾಡ್ತ್. ನಾ ಒಬ್ಬನೇ ದುಡ್ದ್. ಬತ್ತ ಮಿದ್ದ್, ಅಕ್ಕಿ ಮಾಡಿ, ಗಂಜಿ-ಗೈಪೆಲ್ಲಾ ಮಾಡಿ ಇವ್ಕೆ ಕುದ್ದಲಿಗೆ ತಂದ್ ಕೊಡುಕೊಂತ ಸಿಟ್ಟ್‌ಲಿ ಹಾರಿಕೆ ಶುರು ಮಾಡ್ತ್.

ಒಂದು ದಿನ ಮಂಞ ಹಳ್ಳಕ್ಕೆ ಹೋಗಿ, ಇಂದಾರ್ ಲಾಯಿಕ್ ಹರ್‍ದ್ದಂಡದೆ ಎರಡ್ ಉಣೋಕುಂತ ಮೀನ್ ಹಿಡ್ದ್ ತಾತ್. ಒಳ್ಳ ಕಲ್ಲ್‌ಮುಳ್ಳ್, ಕೂರ್‍ಲು, ಮಡಂಜಿಂತ ಸುಮಾರ್ ಮೀನ್ ಸಿಕ್ಕಿತ್. ದೊಡ್ಡ್ ದೊಡ್ಡದರ ಹಜಿರ್ ಮಾಡಿ ಬೆಸೆಗೆಲಿ ತೊಡ್ಪೇಲಿ ಒಣ್ಗಿಕ್ಕೆ ಇಸಿತ್. ಸಣ್ಣ ಸಣ್ಣ ಕಲ್ಲ್‌ಮುಳ್ಳ್- ಕೂರ್‍ಲುನ ಹೆಣ್ಣ್‌ನೊಟ್ಟಿಗೆ ಗೈಪು ಮಾಡಿಕೆ ಹೇಳ್ತ್, ಕತ್ತಲಾಕನ ಒಳ್ಳೊಳ್ಳೆ ಮಾಸ ಇದ್ದ ಮೀನ್‌ನ ಗಂಡಂಗೆನೋ, ಇದ್ಕೆನೂ ಇಸಿಕಂಡ್ ಸಣ್ಣ- ಸಣ್ಣ ಮುಳ್ಳುನ ಮೀನ್‌ನ, ತಲೆಗಳ ಅಜ್ಜಿಗೆ ತಂದ್ ಇಕ್ಕಿತ್. ಈ ಹಲ್ಲಿಲ್ಲದ ಅಜ್ಜಿ ಮೀನ್ ತಿಂಬಕಾಕನ ಮುಳ್ಳೆಲ್ಲ ದೊಂಡೆಗೆ ಹೆಟ್ಟಿ ಕೆಮ್ಮುಲು ಬಂದ್ ಎರಡು - ಮೂರು ಸರ್ತಿ ನೀರ್ ಕುಡ್ದ್ ಹೇಂಗಾರ್ ಉಂಡತ್. ಉಂಡಾದ ಮೇಲೆ ಸೊಸೆನ ಕರ್‍ದ್ ಕೇಳ್ತ್ ನೀ ಏನ್ ನಾ ಬೇಗ ಸಾಯೋಕುಂತ ಆ ತಲೆ - ಮುಳ್ಳುನೆಲ್ಲ ನಂಗೆ ಹಾಕಿದಾ? ಒಳ್ಳೊಳ್ಳದರೆಲ್ಲ ನೀವು ಇಕ್ಯೇಣ್. ನನ್ನ ಕೊಂದಿಯನಾ? ನಿಂಗೆ ನಾ ಬೇಗ ಸತ್ತರೆ ಮತ್ತೆ ಕಾರ್‌ಬಾರ್ ಮಾಡೋಕುಂತ ಆಶೆ ಕಂಡದೆಂತ ಬೊಯಕೆ ಶುರು ಮಾಡ್ತ್. ಸೊಸೆನೂ ಬಾಯಿಗೆ - ಬಾಯಿ ಕೊಟ್ಟು ಅಲ್ಲಿಂದ ಮರ್‍ಟ್ಟ್‌ಕಂಡ್ ಗಂಡನ ಹಕ್ಕಲೆ ಹೋತ್. ನಿಮ್ಮ ಅವ್ವ ಮುದಿ ಅಜ್ಜಿ. ನಂಗೆ ಮೀನ್‌ನ ತಲೆ ಮುಳ್ಳು ಹಾಕಿ ಕೊಟ್ಟದ್‌ಂತ ಜಗಳ ಆಡಿ ಬುಟ್ಟೊ. ನೀವೇ ನೋಡ್ಯಾಳರಿ ಅಲ್ಲ ನೀವ್ಗೆ ನಾ ಇಕ್ಕಿದರ್‍ಲಿ ಅಂತ ಮುಳ್ಳು ಎನಾರ್ ಇತ್ತಾ? ಸುಮ್ಮನಾರ್ ನನ್ನ ನೋಡಿರೆ ಅಜ್ಜಿಗೆ ಆದುಲೆ. ನಾ ಹೀಂಗೆ ಆದರೆ ತೌವರಿಗೆ ಹೋನೆಂತ ಮರ್‍ಡಿಕೆ ಶುರು ಮಾಡ್ತ್. ಒಂದಾ ನಾ ಈ ಮನೇಲಿ ಇರೋಕು. ಇಲ್ಲೆಂತಾದರೆ ಅಜ್ಜಿ ಇರೋಕುಂತ ತೀರ್ಮಾನ ಮಾಡಿಂತ ಹೆಣ್ಣ್ ಒಲ್ಲಿನ ಗುಡುಗ್ ಹಾಕಿ ಮಲ್ಗಿತ್.

ಮಂಜ ಯೋಚನೆ ಮಾಡಿಕ್‌ಂಡ್ ಮಲ್ಗಿತ್ ಎನು ಮಾಡ್ದು, ಇವ್ ಇಬ್ಬೊರು ಇನ್ನ್ ಸರಿಯಾದ್ ಕಾಂಬೋದುಲೆ, ಅವ್ವ ಬೇಗ ಸಾಯೋದು

ಕೂಡಾ ಇಲ್ಲೆ. ಇದ್ ಎಲ್ಲಾರ್ ಮನೆ ಬುಟ್ಟ್ ಹೋದರೆ ನಾ ಒಬ್ಬ ಎಂತ ಮಾಡ್ದುಂತ. ಅವ್ವ ಇನ್ನ್ ಬೊದ್ಕಿದ್ ಸಾಕಾಂತ ಮೂಲೇಲಿ ಒರ್ಗಿಸಿಸಿದ ಒಣ್ಕೆಲಿ ಮಲ್ಕೇಂಡಿದ್ದ ಅವ್ವನ  ತಲೆಗೆ ಬೊಡ್ದದೆ. ನಿದ್ದೆಲಿದ್ದ ಅಜ್ಜಿ ಒಮ್ಮೆ ಹೊಣ್ಕೆಂದಾಂಗೆ ಮಾಡಿ, ಮತ್ತೆ ಸುದ್ದಿನೇ ಇಲ್ಲೆ. ಅವ್ವ ಸತ್ತುಟುಂತ ಮಂಞ ಬೊಳ್ಳಿಗೆ ಬೇಗ ಬೇಗ ಗುಡ್ಡೆಗೆ ಹೋಗಿ ಸೌದೆ ಎಲ್ಲಾ ಮಾಡ್ದೆ. ಹಾಂಗೆ ಕಾಟ ಒಯ್ಬಿದೆ. ಸೌದೆ ತಂದ್ ಇಸಿ ಆದ ಮೇಲೆ ಮನೆಂದ ಅವ್ವನ ಹೆಣನ ಮೊಂದ್ರಿಲಿ ಕಟ್ಟಿ ಕಾಟಕ್ಕೆ ತಂದ್ ಸೌದೆ ಮೇಲೆ ಇಸಿದೆ. ಹಾಂಗೆ ಮಡ್ಳಿಗೆ ಕಿಚ್ಚಿ ಕೊಡೊಮೊಂತ ನೋಡಿರೆ ಕಿಚ್ಚಿನ ಪೆಟ್ಟಿಗೆ ತಂದಿರ್ದುಲೆ. ಓ ದೇವ್ರೇ ಕಿಚ್ಚಿನ ಪೆಟ್ಟಿಗೆ ತಾತ್ತಿಲೆಲ್ಲಾಂತ ಮತ್ತೆ ಮನೆಗೆ ಓಡಿ ಬಂದದೆ. ಮಡ್ಲ್ನೂ ಪೆಟ್ಟಿಗೆನೂ ತಕ್ಕಂಡ್ ಕಾಟದಕ್ಕಲೆ ಬಾಕನ ಅಯ್ಯೆ ಕಾಂಬೋದುಲೆ.

ಅಯ್ಯೆನ ಬಂಡೆ, ಇಲ್ಲಿದ್ದ ಹೆಣ ಏನಾತ್ಂತ ಅತ್ತಾ- ಇತ್ತಾ ಹುಡ್ಕಿದೆ. ಮಂಜ ಕಿಚ್ಚಿನ ಪೆಟ್ಟಿಗೆ ತಾಕೆ ಹೋಕನ ಈ ಕಾಟದ ಮೇಲೆ ಮಲ್ಗಿಸಿದ ಅಯ್ಯೆ ಇನ್ನ್ಪೂರಾ ಸತ್ತಿರ್ದುಲೆ. ತಲೆಗೆ ಹೊಡ್ದದರ್ಲಿ ಬೋದ ಮಾತ್ರ ತಪ್ಪಿದ್. ಮೆಲ್ಲ ನರ್ಕಿಕಂಡ್ ಎದ್ದ್ ಕಾಟಂದ ಕುದ್ದದೆ. ಈ ನರ್ಕುದರ ಸ್ವರ ಕೇಳಿ ಅಲ್ಲೆ ದನ ಮೇಯಿಸ್ತಿದ್ದ ಹೈದಂಗ ಅಜ್ಜಿನ ನೋಡುವೆ. ಈ ಮನೆಗೆ ಹೋದ ಮಂಜ ಬಾಕೆ ಮುಂದೆ ಅಜ್ಜಿನ ಕಾಟಂದ ಇಳ್ಸಿ, ನೀ ಇಲ್ಲಿಂದ ತಪ್ಪಿಸಿಕಾಂತ ಹೇಳ್ದೋ. ಹಾಂಗೆ ಅಜ್ಜಿ ಬದ್ಕಿರೆ ಬೇಡಿತಿಂಬೆಂತ ಅಲ್ಲಿಂದ ಓಡಿಹೋಗಿ ಒಂದು ದೊಡ್ಡ ಜಿಗ್ಗ್ ಬಲ್ಲೇಲಿ ಕುದ್ದದೆ. ಇತ್ತ ಮಂಜ ಹುಡ್ಕಿಕಂಡ್ ಬಾಕ್ಯಾಕನ ಯಾವುದೋ ಇನ್ನೊಂದು ಅಜ್ಜಿ ಚಕ್ತೆ ಕೊಡಿ ಜೆಂಟಿಕಂಡ್ ಇದ್ದದೆ. ಈ ಮಂಜ ಮೋರೆ ಸಹ ನೋಡದೆ. ಓ ನೀ ಇಲ್ಲಿ ಒಳಾನಾಂತ ಹೇಳಿ ಹುಡ್ಕಿಕಂಡ್ ಬಾಕ್ಯಾಕನ ಹಿಡ್ಕಂಡಿದ್ದ ಸೌದೆ ಕೊಳ್ಳಿಲಿ ಅಜ್ಜಿನ ತಲೆಗೆ ಇಸಿದೆ. ಅಜ್ಜಿ ಕುಯಿಂಕ್ತ ಸಹ ಹೇಳದೆ ಸುರಿಂಟಿ ಬಿದ್ದದೆ. ಅಜ್ಜಿನ ಹಿಂದಕ್ಕೆ ನೇಚಿಕಂಡ್ ಹೋಗಿ ಕಾಟದ ಮೇಲೆ ಇಸಿ ಕಿಚ್ಚಿಕೊಟ್ಟದೆ.

ಇವನ ಅಯ್ಯೆ ದೂರಲಿ ಕುದ್ದ್ಕಂಡ್ ಇದರೆಲ್ಲ ನೋಡ್ದೆ. ಮಂಜ ಹೋದ ಮೇಲೆ ಇನ್ನ್ ಎನು ಮಾಡ್ದುಂತ ಯೋಚನೆ ಮಾಡಿಕಾಂಡ್ ಇರಿಕಾಕನ ಅಜ್ಜಿ ಕುದ್ದ ಜಿಗ್ಗ್ ಬಲ್ಲೇಲಿ ದರ್ಗ್ ಅಡಿಲಿ ಎಂತದೋ ಎರಡ್ ಪೆಟ್ಟಿಗೆನಾಂಗೆ ಕಂಡಂದೆ. ಅಜ್ಜಿ ಮೆಲ್ಲ ಹೋಗಿ ದರ್ಗ್‌ನೆಲ್ಲಾ ತೆಗ್ದ್ ನೋಡಿರೆ ಲಾಯಿಕ್‌ನ ಎರಡ್ ಕಬ್ಬಿಣದ ಪೆಟ್ಟಿಗೆಗ. ಅಜ್ಜಿ ಅದರ ಬೀಗ ಒಡ್ದ್ ಬಾಗಿಲ್ ತೆಗ್ದ್ ನೋಡಿರೆ, ಪೆಟ್ಟಿಗೆ ತುಂಬಾ ಚಿನ್ನ, ಹವಳ, ಮುತ್ತುಂತ ತುಂಬಿಕಂಡ್ ಉಟ್ಟು, ಅಜ್ಜಿ ಕುದ್ದ್

ಯೋಜನೆ ಮಾಡಿ ಆ ಎರಡು ಪೆಟ್ಟಿಗೆನ ಮುಚ್ಚಿತ್. ಇದ್ ಯಾರ್‌ದೋ ಕಳ್ಳರ ಕೆಲ್ಸ. ಇಲ್ಲಿ ತಂದ್ ಅಡ್ಡಂಗ್‌ಸಿಸೊಳೊಂತ ನೆನ್ಸಿ ಇದರ ಇಲ್ಲಿ ಇಸುದು ಬೇಡ. ನೋಡ ಮನೆಗೆ ತಕ್ಕಂಡ್ ಪೋಯಿ. ಇದರ ನೋಡಿ ಆದರೂ, ಮಂಜಂಗೂ, ಸೊಸೆಗೂ ಕುಷಿ ಆದೂಂತ ಆ ಎರಡ್ ಪೆಟ್ಟಿಗೆನ ಹಿಡ್ಕಂಡ್ ಮನೆ ಕಡೆ ಹೊರ್ಟತ್.

ದೂರಂದಳೇ ಅಜ್ಜಿ ಬಾದರ ನೋಡಿ ಸೊಸೆ ಮೂರು ಆರ್ಬಟೆ ಕೊಟ್ಟತ್. ಮಂಜ ಓಡಿ ಬಂದ್ ಎಂತಾತ್ ನಿಂಗೆ ಹಾಂಗೆ ಆರ್ಬಟೆ ಕೊಡಿಕೆಂತ ಕೇಳಿರೆ, ಇದ್ ದೆವ್ವ ಹಿಡ್ದವರಾಂಗೆ ದೆರ್ಪಿಕಂಡ್ ಕೈ ತೋರ್ಸಿತ್. ನೋಡಿರೆ ಅವ್ವ ಎರಡ್ ಪೆಟ್ಟಿಗೆನ ಬೊತ್ತಾಗಿ ಬೊತ್ತಾಗಿ ನೇಚಿಕಂಡ್ ಬರ್ತಾ ಉಟ್ಟು. ಇವಂಗೂ ಒಮ್ಮೆ ಹೆದ್ರಿಕೆ ಆಗಿ ಇದ್ದ ಧೈರ್ಯ ಮಾಡಿ ದೊಡ್ಡ ಸ್ವರಲಿ, 'ಅವ್ವಾಂತ' ಕರ್ತ್. ಅವ್ವ ಹೆದ್ರ್‌ಬಡ ಮಂಜ ನಾನೇ ನಿನ್ನ ಅವ್ವ . ಇದ್ ಕೊಲೆ, ದೆವ್ವ ಅಲ್ಲ. ನೀ ನನ್ನ ಒಳ್ಳಗಳ್ಗೇಲಿ ಸ್ವರ್ಗಕ್ಕೆ ಕಳ್ಸಿಯಳ. ಅಲ್ಲಿ ಹೋದ ಕೂಡ್ಲೆ ನಂಗೆ ಬಾರಿ ಗಮ್ಮತ್ ಎಲ್ಲಾ ಮಾಡಿ ಕತ್ತಲೆಗೆ ಕೋಳಿಗೈಪು ಏನ್, ಪೊಕ್ಕುಳ ರೊಟ್ಟಿ ಏನ್, ಇನ್ನ್ ಕುಡ್ಯಕ್ಕೆ ಬೀಜದಣ್ಣ್ ಸರಾಯಾ ಏನೆಲ್ಲಾ ಇತ್ತ್. ಒಟ್ಟಿಗೆ ಈ ಎರಡ್ ಪೆಟ್ಟಿಗೇಲಿ ಚಿನ್ನಾಭರಣ ಎಲ್ಲಾ ತುಂಬಿಸಿ ಕೊಟ್ಟೊ. ನೀ ನಿನ್ನ ಮನೆಗೆ ತಕ್ಕಂಡ್ ಹೋಗುಂತ. ಬೇಕಾರೆ ದೊಡ್ಡ ಪೆಟ್ಟಿಗೆನ ತಕಂಡ್ ಹೋಗುಂತ ಹೇಳ್ದೋ. ಆದ್ರೆ ನಂಗೆ ನೇಚಿಕಂಡ್ ಬಾಕೆ ಬೊತ್ತುಂತ ಇದರ ತಕ್ಕಂಡ್ ಬಂದೆ. ಅದರೊಟ್ಟಿಗೆ ನಿಮ್ಮಲ್ಲಿ ಯಾರಾರ ಗಟ್ಟಿ ಮುಟ್ಟುನೋವು ಇದ್ದರೆ ಕಳ್ಸ್, ಇನ್ ಬೇಕಾರೆ ಚಿನ್ನಾಭರಣ ಕೊಟ್ಟನೇಂತ ಹೇಳ್ಯೋಳ. ನಂಗೆ ಆದುಲೆಲ್ಲಾ ಮಂಜ ಇಂದ ಇದರ ತಕಾಂತ ಅಜ್ಜಿ ಕೊಟ್ಟತ್.

ಪೆಟ್ಟಿಗೆ ಬಾಗಿಲ್ ತೆಗ್ದ್ ನೋಡಿರೆ, ಬಗೆ-ಬಗೆನ ಚೈನ್‌ಗ, ಬೆಂಡ್‌ಗ, ಮುತ್ತಿನ ಚೈನ್‌ಗ, ಎಸ್ಟೋ ಇತ್ತ್ . ಇದರ ನೋಡಿ ಸೊಸೆಗೂ ಮಂಜಗೂ ಬಾರಿ ಕುಸಿ ಆತ್. ಸೊಸೆ ಅತ್ತೆಗೆ ತಿಂಬಕೆ, ಕುಡಿಯಕೆ ಎಲ್ಲಾ ತಂದ್ ಕೊಟ್ಟತ್ತ್. ಅಲ್ಲಿ ಯಾರ್‍ಯಾರ ಇದ್ದೊಂತ ಎಲ್ಲಾ ಕೇಳ್ತ್. ಇನ್ನ್‌ಸಾ ಅಲ್ಲಿ ಚಿನ್ನ ಉಟ್ಟಾಂತ ಕೇಳ್ತ್. ಹೌದು ಮಂಜ ನಿಂಗೆ ಬೇಕಾದ ಸೊಂಟದ ಪಟ್ಟಿ, ಕೆಬಿಗೆ ಜುಮ್ಕಿ, ಕಾಲ್ಗೆಜ್ಜೆ ಎಲ್ಲಾ ಉಟ್ಟು. ಆದ್ರೆ ನಂಗೆ ನೇಚಿಕಂಡ್ ಬಾಕೆ ಅದುಲೆಂತಾ ಬುಟ್ಟು ಬಂದೇಂತ ಅಜ್ಜಿ ಹೇಳ್ದೊ. ಈ ಸೊಸೆ ಸತ್ಯ ನಂಬಿ ಗಂಡನೊಟ್ಟಿಗೆ ಹೇಳ್ತ್ ನಾ ಸ್ವರ್ಗಕ್ಕೆ ಹೋಕು ನನ್ನ ಕಳ್ಸಿ ಈ ಅತ್ತೆ ಎಲ್ಲಾ ಬುಟ್ಟು ಬಂದೊಳೊಂತ ಗಂಡನ

ನಿಲ್ಲಿಕೆ ಕುದ್ರಿಕೆ ಬುಟ್ಟತ್ಲೆ. ಇನ್ನೆನ್ ಮಾಡ್ದು?. ಗಂಡನೂ ಸತ್ಯ ನಂಬಿ ಹೆಣ್ಣ್‌ನ ತಲೆಗೆ ಒಣ್ಕೆಲಿ ಒಂದ್ ಕೊಟ್ಟತ್ತ್. ಹೆಣ್ಣ್ ಬಾಳೆ ಬಿದ್ದಾಂಗೆ ಬೀತ್. ಯಾರಿಗೂ ಗೊತ್ತಾಕೆ ಬೊತ್ತುಂತ ಹೆಣ್ಣ್‌ನ ಮೊಂದ್ರಿಲಿ ಸುತ್ತಿ ಅಯ್ಯೆನಕಾಟ ಒಯ್ಪಿದಲ್ಲೇ ಹಕ್ಕಲೆ ಕಾಟ ಒಯ್ಪಿ, ಸೌದೆ ಎಲ್ಲ ಇಸಿ. ಹೆಣ್ಣ್‌ನ ಹೆಣನ ಅದರ ಮೇಲೆ ಇಸಿ, ಸ್ವರ್ಗಕ್ಕೆ ಹೋಗುಂತ ಕಿಚ್ಚಿ ಕೊಟ್ಟತ್. ಹೆಣ್ಣ್ ಹೊತ್ತಿ ಬೂದಿ ಆತ್. ಎರಡ್ ದಿನ ಕಳ್ತ್ ಮೂರು ದಿನ ಕಳ್ತ್, ಹೆಣ್ಣ್ ಬಾತಿಲೆ. ಅಯ್ಯೇನೊಟ್ಟಿಗೆ ಕೇಳ್ತ್, ಏನ್ ಅವ್ವ ನಿನ್ನ ಸೊಸೆ ಬಾತ್‌ಲೆಂತ, ಬಾದು ಮಂಞ ಬಹುಷ ದೊಡ್ಡ ಪೆಟ್ಟಿಗೆ ಸಿಕ್ಕಿರೋಕು ನೇಚಿಕಾಂಡ್ ಬಾಕನ ಇನ್ನು ಒಂದೆರಡ್ ದಿನ ಆದುಂತ ಮನ್ಸಲೇ ನೆಗಾಡಿಕೊಂಡ್ ಹೇಳ್ತ್. ಹೋದ ಹೆಣ್ಣ್ ಒಂದು ವಾರ ಆದರೂ ಬಾತಿಲೆ. ಮಂಜಂಗೆ ಬೇಜಾರ್ ಆಗಿ ಅಯ್ಯೆನೊಟ್ಟಿಗೆ ವಾಪಸ್ಸ್ ಕೇಳ್ತ್, ಯಾಕೆವ್ವ ನಿನ್ನಾ ಸೊಸೆ ಬಾತ್‌ಲೆಂತ. ಅಯ್ಯೆ ಹೇಳ್ತ್ ನೋಡು ಮಂಜ ಅದ್ ಬಾರೀ ಅನಾಚಾರ ಮಾಡಿರೋಕು. ನೋಡು ನಂಗೆ ಮೀನ್ ತಲೆ ಮುಳ್ಳು ಎಲ್ಲಾ ಕೊಟ್ಟು ನೀವಿಬ್ಬರ್ ಒಳ್ಳೆ ಮಾಸದ ಮೀನ್ ತಿಂದ್, ನನ್ನೊಟ್ಟಿಗೆ ಜಗಳ ಮಾಡಿ ನಿನ್ನೊಟ್ಟಿಗೆ ದೂರು ಹೇಳಿ ನನ್ನ ಕೊಲ್ಲುವಾಂಗೆ ಮಾಡ್ತಾಲ್ಲ. ಅದ್ಕೆ ಬಹುಶಃ ದೇವ್ರು ಅವಳ ದಾರಿ ತಪ್ಪಿಸಿ ನರಕದ ದಾರಿ ತೋರ್ಸಿರೋಕು. ಅಂದರೆ ನರಕಕ್ಕೆ ಹೋದರೆ ಚಿನ್ನದ ಪೆಟ್ಟಿಗೆ ತಕ್ಕಂಡ್ ಅದ್ ಬಾಕಿಲೆನಾ? ಮಂಜ ಕೇಳ್ತ್. ಇಲ್ಲೆ ಮಂಜ, ಅದ್ ಬಾದರ ಆಶೆ ಬುಡು. ನಾವು ಮುಂದೆನಾಂಗೆ ಲಾಯಿಕ್‌ಲಿ ಇರೊಮೋ. ಇನ್ನ್ ಜೀವನ ಪರ್ಯಂತ ಬೊದ್ಕಿಕೆ, ಮಹಾರಾಜರಾಂಗೆ ಇರ್ಬಕ್ಕೆ ನಾವುಗೆ ತೊಂದರೆ ಇಲ್ಲೆಂತ ಸಮಧಾನ ಮಾಡಿ, ಅಯ್ಯೆನು ಮಂಜನು ಕುಷಿಲಿ ಜೀವನ ಮಾಡಿಕಂಡ್ ಇದ್ದೋ.

* * * * *



# ಆಳಕ್ಕಿ (ಆಳು+ಹಕ್ಕಿ)

ಒಂದು ಊರ್‌ಲಿ ಒಂದು ಗಂಡ-ಹೆಣ್ಣ್ ಇದ್ದೊ. ಅವುಕೆ 5 ಜನ ಗಂಡ್ ಮಕ್ಕ ಹುಟ್ಟಿವೆ. ಹಂಞ ಸಮಯ ಕಳ್ದ ಮೇಲೆ ಆ ಗಂಡ್‌ಸ್‌ಗೆ ಇನ್ನೊಂದು ಮದುವೆ ಆದೆ. ಆ ಹೆಣ್ಣ್‌ಲಿ ಒಂದು ಗಂಡ್, ಒಂದು ಹೆಣ್ಣ್ ಕೂಸು ಹುಟ್ಟಿದೆ. ಈಗ ಒಟ್ಟು 6 ಗಂಡ್ ಒಂದು ಹೆಣ್ಣುಂತೇಳಿ ಎಳ್ ಜನ ಮಕ್ಕ ಆದವೆ. ಈ ಏಳ್ ಜನ ಮಕ್ಕಳೂ ಒಂದೇ ಅಯ್ಯ-ಅಪ್ಪನ ಮಕ್ಕಳಾಂಗೆ ಬಾಳಿ ಬದ್ಕುವೆ. ಆರ್ ಜನ ಗಂಡ್ ಮಕ್ಕಳಿಗೆ ಒಬ್ಬನೇ ತಂಗೆ. ಬಾರೀ ಪ್ರೀತಿಲಿ ಅವಳ ನೋಡಿಕೊಂಡವೆ. ಎಲ್ಲವೂ ಒಟ್ಟಿಗೆ ಆಟ ಆಡ್ದು, ಉಂಬೋದು-ತಿಂಬೋದು ಒಟ್ಟಿಗೆ ಇದ್ದವೆ. ಕತ್ತಲೆಗೆ ಮಲ್ಗಿಕನ ಒಟ್ಟಿಗೆ ಮಲ್ಗುವೆ. ಹೀಂಗೆ ಇರಿಕಾಕನ ಎರಡನೇ ಹೆಣ್ಣ್ ಒಂದು ದಿನ ಕಾಯಿಲೆ ಬಿದ್ದ್ ತೀರಿಕಂಡದೆ. ಹಾಂಗೆಂತ ದೊಡ್ಡವ್ವ ಅದರ ಇಬ್ಬರು ಮಕ್ಕಳ ನನ್ನ ಸ್ವಂತ ಮಕ್ಕಳಾಂಗೆ ಸಾಂಕಿದೆ. ಅವ್ಕೆನೂ ಹೆತ್ತ ಅಯ್ಯ ಸತ್ತು ಹೋದರೂ ಏನೊಂದೂ ತೊಂದರೆ ಇಲ್ಲದೆ ಬದ್ಕುವೆ. ಅಣ್ಣ ತಮ್ಮಂದರೊಟ್ಟಿಗೆ ದೊಡ್ಡವ್ವನೇ ಅಯ್ಯೆನಾಂಗೆ ನೋಡಿಕಂಡದೆ. ಹೀಂಗೆ ಕಾಲ ಕಳೀತ ಇರಿಕಾಕನ ಅವರ ಒಬ್ಬನೇ ತಂಗೆ ಪ್ರಾಯಕೆ ಬಂದದೆ. ಪ್ರಾಯ ಬಂದ

ಮೇಲೆ ಮೈ-ಕೈ ತುಂಬಿಕೊಂಡ್ ನೋಡಿಕನ ಎಲ್ಲವುಕ್ಕೂ ಕೊಂಡಾಟ ಆದೆ. ತಂಗೆ ಏನೂ ಕೇಳಿರೂ ಅಣ್ಣಂದಿರ್ ಓಡೋಡಿ ತಂದು ಕೊಟ್ಟವೆ. ಆಟ ಎಲ್ಲ ಆಡಿಕಾಕನ ಪ್ರತೀ ಸರ್ತಿನೂ ತಂಗೆನೇ ಗೆಲ್ಲುವಾಂಗೆ ನೋಡಿಕಂಡವೆ. ಅದ್ಕೆ ತಿಂಬಕೆ ಮಾಯಿನ ಹಣ್ಣ್, ಹಲ್ಸಿನ ಹಣ್ಣ್, ಗೊಟ್ಟೆ ಹಣ್ಣ್ ಮಡ್ಕುರ ಕಾಯಿ, ಜೊಂಪುಳು ಹಣ್ಣ್ ಹೀಂಗೆ ಕಾಡಂದ ತಂದ್ ಕೊಯಿದ್ ಕೊಡುವೊ. ಒಟ್ಟುಲಿ ಬಾರೀ ಲಾಯಿಕ್‌ಲಿ ಸಾಂಕೇಣಿದ್ದ ತಂಗೆ ಮದುವೆಗೂ ರೆಡಿ ಆತ್.

ಹೀಂಗೆ ಜೀವನ ಮಾಡಿಕಂಡ್ ಇರಿಕಾಕನ ಗಂಡ-ಹೆಣ್ಣ್‌ಗ್ ಯಾಕೋ ತಿರುಪತಿಗೆ ಹೋಕುಂತ ಆಶೆ ಆತ್. ಅಲ್ಲಿ ಹೋಗಿ ವೆಂಕಟ್ರಮಣ ದೇವರ ಪೂಜೆ ಮಾಡೋಕು. ಹೇಂಗಿದ್ದರೂ ಅವು ನಮ್ಮ ಕುಲ ದೇವ್ರು. ಸಾಯಕೆ ಮುಂದೆ ಒಮ್ಮೆ ಹೋಗಿ ಬರೋಕುಂತ ಆಸೆ ಆತ್. ಆಗ ತಿರುಪತಿಗೆ ಹೋದು, ಕಾಶಿಗೆ ಹೋದುಂತೇಳಿರೆ ಹೋದೋವು ವಾಪಾಸ್ ಬರುವಂತೇಳುವ ಗ್ಯಾರಂಟಿ ಇರ್‌ತ್ತಿತ್‌ಲೆ. ಯಾಕೆಂತೇಳಿರೆ ಆಗಿನ ಕಾಲಲಿ ಕಾಡ್ ದಾರೀಲಿ ನಡ್ದೇ ಹೋಕು. ತಿರುಪತಿಗೆ ಹೋಗಿ ಬರೋಕುಂತಾದರೆ ಹೇಂಗಿದ್ದರೂ ಒಂದು-ಒಂದುವರೆ ತಿಂಗಳು ಬೇಕಾದೆ. ದಿನಕ್ಕೆ ಐದಾರ್ ಮೈಲು ನಡ್ದ್ ಮತ್ತೆ ಎಲ್ಲಿಯಾರೂ ದೇವಸ್ಥಾನಗಳ್ಳಿ, ಸಂಬಂಧಿಕರ ಮನೇಲಿ ನಿಲ್ಲುದು. ಮುಂದೆ ಹೋದು ಹೀಂಗೆ ದಾರಿ ಸಾಗೋಕು, ಹೊಕ್ಕ್ಯಾಕನ ಎರಡಾಳ್‌ನಷ್ಟು ದೊಡ್ಡ ಬೆತ್ತದ ಇಲ್ಲರೆ, ರೆಂಕಿಲ್ ದೊಣ್ಣೆ ಕಡ್ದ್ ಹೊರ್ಟರೆ, ಬಾಕ್ಯಾಕನ ಅದ್ ಬುಜಂದ ಕೆಳಗೆ ಅದುಂತ ಹೇಳ್ವೆ. ಹಾಂಗೆ ಇವುನೂ ಗಂಡ ಹೆಣ್ಣ್ ದಾರಿ ಖರ್ಚಿಗೆಂತ ಬೇಕಾದೆಲ್ಲಾ ಜೋಳಿಗೆಗೆ ತುಂಬಿಸಿ, ರೆಡಿ ಮಾಡ್ದೊ. ಹೆಣ್ಣ್ ಜೋಳಿಗೆ ಹಿಡ್ಕಂಡರೆ, ಗಂಡ ಒಂದು ಕಬ್ಬಿಣದ ಪೆಟ್ಟಿಗೆನೂ ಹಿಡ್ಕಂಡ್ ಹೊರ್ಡುದೂಂತ ನಿಘಂಟ್ ಆತ್. ಆ ಪೆಟ್ಟಿಗೇಲಿ ತಿರುಪತಿ ತಿಮ್ಮಪ್ಪಂಗೆ ಕಟ್ಟಿದ ಹರ್ಕೆ, ಚಿಲ್ಲರೆ ದುಡ್ಡ್, ಒಳ್ಳೆ ಮೆಣ್ಸ್ ಎಲ್ಲಾ ಇತ್ತ್. ಅದ್ಕೆ ಒಂದು ಹಿತ್ತಾಳೆ ಬೀಗ ಹಾಕಿ ಬೀಗದ ಕೈನ ಗಂಡ್‌ಸ್‌ನ ಸೊಂಟಲಿ ಪಟ್ಟೆ ನೂಲಲಿ ಕಟ್ಟಿಕಂಡೊ.

ಬೊಳಿ ಬೊಳಿ ಬುಡಿಕಾಕನ ಗಂಡ-ಹೆಣ್ಣ್ ತಿರುಪತಿಗೆ ಹೊರ್ಟ್ರೊ. ನೆರೆಕರೆವು ಎಲ್ಲ ಇವರ ಕಳ್ಸಿಕೆ ಬಂದಿದ್ರೊ. ಮಕ್ಕಳೂ ದೇವುರ ಹಕ್ಕಲೆ ಹೊರ್ಟ್ ನಿಂತ ಅಯ್ಯ ಅಪ್ಪನ ಕಾಲ್ ಹಿಡ್ಕಂಡೊ. ಅಯ್ಯ-ಅಪ್ಪ ಜಾಗ್ರತೆ ಮಕ್ಕಳೇ. ತಂಗೆನ ಲಾಯಿಕ್ ನೋಡಿಕಣಿ. ಹಾಂಗೆ ಕಡೇ ತಮ್ಮನ, ತಂಗೆನ ಕೂಡಾ ಒಟ್ಟಿಗೆ ಕರ್ಕಣಿ. ನಾವು ಹೋಗಿ ಬೇಗ ಬಂದವೆ. ಏನೂ ಜಗಳ, ಹೊಡ್ಕಂದ್ -

ಬೊಡ್ಕಾಂದ್ ಮಾಡ್ಬೋಡಿ. ಹಟ್ಟಿಲಿದ್ದ ದನ-ಕರ್‌ಗ ಜಾಗ್ರತೆ. ಕೋಳಿಗಳ ಹಗಲೆಲ್ಲಾ ಗೂಡಿಗೆ ಹಾಕಿ-ಹಿಂಬೊತ್ತಾಕನ ಬುಟ್ಟು ನೀವು ಕದ್‌ರ್ ತಿನ್ನದಾಂಗೆ ಜಾಗ್ರತೆ ನೋಡಿಕಾಕುಂತ ಎಲ್ಲಾ ಹೇಳಿ ಹೊರ್‍ಟೊ. ಹೊರ್‍ಡಿಕಾಕನ ಶ್ರೀ ವೆಂಕಟ್ರಮಣ ದೇವ್ರ ಪಾದಕ್ಕೆ ಗೋವಿಂದಾನ-ಗೋವಿಂದಾಂತ ಎಲ್ಲವೂ ಗೋವಿಂದ ಹಾಕಿದೋ. ಇಬ್ಬರೂ ತಲೆ ಮೇಲೆ ಗಂಟ್‌ನ ಇಸಿಕ್‌ಂಡ್ ನಡ್ಯಕೆ ಶುರು ಮಾಡ್ದೊ.

ಮನೇಲಿದ್ದ ಮಕ್ಕ, ಅಯ್ಯ-ಅಪ್ಪ ಹೇಳ್ದಾಂಗೆ ಲಾಯಿಕ್‌ಲಿ ಉಂಬೋದು-ತಿಂಬೋದು ಮಾಡಿಕಂಡ್ ಇದ್ದೊ. ಸುಮಾರ್ ಹತ್ತ್ ಹದಿನೈದ್ ದಿನ ಕಳ್ತ್. ಅದೇ ಸಮಯಕ್ಕೆ ಸರಿಯಾಗಿ ಕಾಡ್‌ಲಿ ರೆಂಜಾಳ ಹೂ ಆಕೆ ಶುರು ಆಗುಟು. ಅದರ ಪರಿಮಳ ಘಮ್ಮಂತ ಮನೆಗೆ ಹೋಡಿತಾ ಉಟ್ಟು. ಇದರ ಪರಿಮಳ ತಂಗೆಗೆ ಕೇಳಿ ಆಶೆ ಆತ್. ಅಣ್ಣಂದಿರ ಕರ್‌ದ್ ಹೇಳ್ತ್. ಆ ರೆಂಜಾಳ ಹೂ ನ ಪರಿಮಳ ಕೇಳಿ ನಂಗೆ ಆಶೆ ಆಗ್ತಾ ಉಟ್ಟು. ಅದರ ಉದ್ದ ಮಾಲೆ ಮಾಡಿ ಮುಡಿಯೋಕೂಂತ ನನ್ನ ಆಶೆ. ನೀವು ಕೊಯ್ದ್ ಕೊಡುವರೆಂತ ಕೇಳ್ತ್. ತಂಗೆನ ಯಾವ ಆಶೆನೂ ಇಲ್ಲೆಂತ ಹೇಳದ ಅಣ್ಣಂದಿರ್ ಇದರ ಕೂಡಾ ಇಲ್ಲೆಂತ ಹೇಳ್ದುಲೆ. ಆದರೆ ಈ ರೆಂಜಾಳ ಮರಂತೇಳಿರೆ ಅದು ಬಾರೀ ದೊಡ್ಡ ಮರ. ಆಕಾಶದೆತ್ತರಕ್ಕೆ ಬೆಳ್ದುಟು. ಹೇಂಗಾದರೂ ಒಂದ್ ಇಪ್ಪತ್ತ್ ಆಳ್ ಎತ್ತರದ ಮರ. ಅದರ್‌ಂದ ಹೇಂಗೆ ಹೂ ಕೊಯ್ಯೊದುಂತ ಯೋಚನೆ ಮಾಡ್ತ ಕುದ್ದೊ. ಆಗ ಒಬ್ಬೊಬ್ಬ ಒಂದೊಂದು ಐಡಿಯಾ ಯೋಚನೆ ಮಾಡ್ದೊ. ಅದರ್‍ಲಿ ಮುಂದೇನ ಹೆಣ್ಣ್‌ಲಿ ಕಡೇಂವ ಯೋಚನೆ ಮಾಡಿ ಹೇಳ್ತ್. ನೀವು ಯಾರು ಬೊಯ್ಯದಿದ್ದರೆ ನನ್ನದೊಂದು ಐಡಿಯಾಂತ ಹೇಳ್ತ್. ಆಗ ಇಲ್ಲೆ ಮಾರಾಯ ಬೊಯ್ಯೋದು ಯಾಕೆ ಹೇಳ್‌ಂತ ಹೇಳ್ದೊ. ಏನಿಲ್ಲೆ ಈಗ ನಮ್ಮ ಅಪ್ಪ-ಅಯ್ಯ ಇಲ್ಲೆ. ನಮ್ಮ ಕಿರಿಯ ತಮ್ಮನೂ ತಂಗೇನೂ ಅಲ್ಲೆಲ್ಲೋ ಗದ್ದೆ ಹಕ್ಕಲೆ ಹೋಗೋಳೊ. ಈಗ ನಾ ಎಂತ ಹೇಳ್‌ತೇಳಿರೆ, ನಮ್ಮ ಚಿಕ್ಕಮ್ಮ ಹೇಂಗೂ ಸತ್ತು ಹೋಗೋಳೊ. ತಂಗೆನ ನಾಳೆ-ನಾಳ್ದಂತ ಮದುವೆ ಮಾಡಿ ಕೊಟ್ಟವೆ. ನಾವು ಹೂ ಕೊಯ್ಯುವ ನೆಪಲಿ ಕಡೇ ತಮ್ಮನ ಮರದ ಕೊಡಿಗೇ ಹತ್ತಿಸೋಮ. ನೀ ಹೂ ಕೊಯ್ಯೊದ್ರಲ್ಲಿ ಬಾರೀ ಹುಷಾರ್ ಅಂತ ಹೋಗೊಳೊಮ. ಅಂವ ಹೇಂಗೂ ನನ್ನ ಸ್ವಂತ ತಂಗೆಗೆ ಕುಷಿಲೇ ಕೊಡಿ ಕೊಡಿ ಹೋಗಿ ಹೂ ಕೊಯ್ಯಕಾಕನ ನಾವು ಬುಡಂದ ಏಣಿ ಬಿಚ್ಚಮೊ. ಅಂವ ಅಲ್ಲೇ ಸಾಯಲಿ. ಆಗ ನಾವ್ಗೆ, ಅವಂಗೆ ಆಸ್ತಿಲಿ ಕೊಡುವ ಪಾಲು ನಿಂತದೆ. ಯಾಕೆಂತೇಳ್ರೆ ಅಪ್ಪ

ಅವಂಗೆ ಒಬ್ಬಂಗೆ ಆಸ್ತಿಲಿ ಅರ್ಧ ಪಾಲು ಕೊಡಕ್ಕೂಂತ ಒಳೊ. ಇಬ್ಬರೂ ಹೆಣ್ಣ್‌ಗಳ ಮಕ್ಕಳಿಗೆ ಸಮಾನ ಪಾಲ್‌ಂತ ತೀರ್ಮಾನ ಮಾಡಿ, ಮೊನ್ನೆ ಪಟೇಲ್ರೊಟ್ಟಿಗೆ ಹೇಳ್ತಾ ಇದ್ದೊ. ನಾವ್ಗೆ ಐದ್ ಜನಂಗೆ ಒಂದು ಪಾಲಾದರೆ, ಅವಂಗೆ ಒಬ್ಬಂಗೆ ಅರ್ಧ ಪಾಲ್. ಅಂವ ಸತ್ತರೆ ನಾವ್ಗೆ ಎಲ್ಲಾ ಆಸ್ತಿ ಸಮಪಾಲಾಗಿ ಸಿಕ್ಕಿದೆ. ಇದ್ಕೆ ಏನ್ ಹೇಳಿರೆ ಅಂತ ಕೇಳ್ತ್. ಎಲ್ಲವೂ ಒಮ್ಮೆ ಮೋರೆ ಮೋರೆ ನೋಡಿಕ್ಕಂಡ್ ಮನಸ್ಸ್‌ಲಿ ಬೇಡಾಂತ ಅನ್ನಿರೂ, ಆಸ್ತಿಲಿ ಪಾಲ್ ಜಾಸ್ತಿ ಸಿಕ್ಕಿದೆಂತ ಆದೂಂತ ತಲೆ ಅಲ್ಲಾಡಿಸಿದೊ. ಆಗ ನಡುನವ ಹೇಳಿಕೆ ಶುರ್ ಮಾಡ್ತ್. ಎಲ್ಲವೂ ಒಂದೊಂದು ಏಣಿ ಕಡ್ಕಂಡ್ ಬಾದು. 7 ಜನ ಕೂಡಾ ಏಣಿ ತಂದ್, ಮರಕ್ಕೆ ಕಟ್ಟಿ, ಅವರವರ ಏಣಿ ಎತ್ತುವಲ್ಲಿ ಎಲ್ಲವೂ ಹೂ ಕೊಯ್ಯುದೂಂತ ತೀರ್ಮಾನಕ್ಕೆ ಬಂದೊ. ಹಾಂಗೆ ಏಳ್ ಜನ ಕೂಡಾ ಏಣಿ ತಂದ್ ರೆಂಜಾಳ ಮರಕ್ಕೆ ಕಟ್ಟಿದೊ. ಗಂಡ್ ಮಕ್ಕಳ್‌ಲಿ ಹಿರಿಯವ ಶುರುಗೆ ಏಣಿ ಕಟ್ಟಿತ್. ಅವಂದ ಮೇಲೆ ಅವನ ನಂತರದವ, ಆಮೇಲೆ ಮೂರನೆಯವ ಹೀಂಗೆ ಕಟ್ಟಿ ಕಂಡ್, ಕಟ್ಟಿಕಂಡ್ ಕೊಡೀಗೆ ಕಿರಿಯಂವತೇಳಿರೆ ಎರಡನೇ ಹೆಣ್ಣಿನ ಮಂಜ ಏಣಿ ಕಟ್ಟಿತ್. ನನ್ನ ಪ್ರೀತಿನ ತಂಗೆ ಹೂಗೆ ಆಸೆ ಪಟ್ಟುಟೂಂತ ಮರದ ಹಿಳ್ಳದ ಕೊಡಿ ಕೊಡಿ ಹೋಗಿ ಹೂ ಕೊಯ್ದದೆ. ಒಂದೊಂದು ಹಿಳ್ಳದ ಕೊಡಿಲಿ ಈ ಹೂ ಅರಳಿದರ ನೋಡಿರೆ ಈವಂಗೇ ಆಸೆ ಆಗ್ತಾ ಇತ್ತ್. ಹೂ ಕೊಯ್ದ್ ಕೊಯ್ದ್ ಹೊತ್ತು ಹೋದದ್ದೇ ಗೊತ್ತಾತ್ಲೆ. ಅಣ್ಣಂದಿರ್ ಹೂ ಕೊಯ್ದು ಆಗಿ ಒಬ್ಬೊಬ್ಬನೇ ಅವರವರ ಏಣಿ ಬಿಚ್ಚಿ ಇಳ್ದೊ. ಕೊಡೀಲಿ ಹತ್ತಿದ ಕಿರಿಯಂವ ಮಾತ್ರ ತಂಗೆಗೆ ಪ್ರೀತಿಂದ ಹೂ ಕೊಯ್ಯೊಂಡೇ ಬಾಕಿ. ಕೊಯ್ದು ಕೆಳಗೆ ನೋಡಿರೆ , ಕೊಡೀಲಿ ಅಂವಕಟ್ಟಿದ ಏಣಿ ಬುಟ್ಟರೆ, ಒಳ್ದದರೆಲ್ಲ ಅವನ ಅಣ್ಣಂದ್‌ರ್ ಬಿಚ್ಚಿಕಂಡ್ ಹೋಗೊಳೊ. ಕೊಡಿಲಿದ್ದ ತಮ್ಮಂಗೆ ಹೆದ್ರಿಕೆ ಆತ್. ಅಣ್ಣಾ..ಅಣ್ಣಾಂತ ಕರೆಕೆ ಶುರು ಮಾಡ್ತ್. ಅದ್ರೆ ಅಣ್ಣಂದಿರ ಸುದ್ದಿನೆ ಇಲ್ಲೆ. ಕರ್ದ್ ಕರ್ದ್ ತಮ್ಮಂಗೆ ಸ್ವರ ಇಲ್ಲದಾಂಗೆ ಆತ್. ತಂಗೆನೇನೂ ಕರ್ತ್. ಸುದ್ದಿ ಇಲ್ಲೆ. ಕೊಯ್ದ ಹೂ ನ ಗೆಲ್ಲ್‌ಗೆ ಕಟ್ಟಿ ಹಾಂಗೆ ಕುದ್ದತ್. ಕತ್ತಲೆಗೆ ಎಲ್ಲ ಹಾಂಗೆ ಕುದ್ದ್ ಬೊಳಿ ಬೊಳಿ ಬುಡಿಕಾಕನ ಮತ್ತೆ ಕರೆಕೆ ಶುರು ಮಾಡ್ತ್. ಅಣ್ಣಾ.. ಅಣ್ಣಾಂತ. ಹೀಂಗೆ ಕರೆಯೋದು, ಆಕಾಶಲಿ ನಾರಾಯಣ ದೇವ್ರು ಅವರ ಹೆಣ್ಣ್ ಲಕ್ಷ್ಮಿನೊಟ್ಟಿಗೆ ಲೋಕ ಸುತ್ತಿಕೆ ಹೊರ್ಟು ಹೋಗೊವುಕೆ ಕೇಳ್ದೆ. ಲಕ್ಷ್ಮೀದೇವಿ ಗಂಡಂಗೆ ಹೇಳ್ದೆ. ಚೂರು ನಿಲ್ಲಿ ಯಾರೋ ಕರ್ದಂಗೆ ಕೇಳ್ತಾ ಉಟ್ಟು. ಆಗ ನಾರಾಯಣ ದೇವ್ರು ನೀ ಒಮ್ಮೆ ಸುಮ್ಮನಿರ್. ಈ ಕಾಡ್‌ಲಿ

ಯಾರ್ ಕರೆಯೋದುಂತ ಹೇಳ್ದೊ. ಮತ್ತೆ ಕರೆಯೋದು ಕೇಳ್ಟೆ. ಆ ದನಿ ಯಾರೋ ಮಕ್ಕ ಕರ್ಡ್ಂಗೆ ಕೇಳ್ಟೆ. ಒಮ್ಮೆ ನೋಡೋಮಾಂತ ಒತ್ತಾಯ ಮಾಡ್ದೆ. ಹಾಂಗೆ ನಾರಾಯಣ ದೇವ್ರು ಮತ್ತೆ ಲಕ್ಷ್ಮೀ ಕರೆದ ಜಾಗದಕ್ಕಲೆ ಬಂದವೆ. ಮರಲಿ ಕುದ್ದ ಮೊಯಿಂಸ ಕರ್ಡ್ ಕರ್ಡ್ ಸ್ವರ ಎಲ್ಲ ಹೋಗಿ ಮಕ್ಕಳಾಂಗೆ ಕೇಳ್ದು. ನಾರಾಯಣ ದೇವರು ಅವನ ವಿಚಾರಿಸುವೆ. ಅಂವ ಎಲ್ಲಾ ಕಥೆನ ಹೇಳ್ದೆ. ಅಯ್ಯೆ-ಅಪ್ಪ ತಿರುಪತಿಗೆ ಹೋಗೋಳೊ. ನಾವು ಆರು ಜನ ಗಂಡ್ ಮಕ್ಕ. ಒಂದೇ ತಂಗೆ ಒಳದ್. ಇಲ್ಲಿಗೆ ತಂಗೆಗೆ ಹೋ ಕೊಯ್ಯಕೆ ಬಂದದ್. ಅಣ್ಣಂದಿರ್ ಎಲ್ಲಾ ಹೂ ಕೊಯ್ದಾಗಿ, ಅವರವರ ಏಣಿನ ಬಿಟ್ಟ್‌ಕಂಡ್ ಹೋಗೋಳ. ನನ್ನ ಏಣಿ ಕೊಡೀಲಿ ಇದ್ದದರ್‌ಂದ ನಂಗೆ ಇಳಿಕೆ ಆಗ್ತಾ ಇಲ್ಲೆ. ಅಣ್ಣಂದ್‌ರ ಕರ್ದರೆ ಅವು ಬಾದುಲೆಂತ ಹೇಳ್ತ್. ನಾರಾಯಣ ದೇವ್ರುಗೂ ಲಕ್ಷ್ಮಿಗೂ ಕಥೆನ ಕೇಳಿ ಬೇಜಾರ್ ಆದೆ. ಅವರ ದಿವ್ಯ ಜ್ಞಾನಕ್ಕೆ ಅಣ್ಣಂದ್‌ರ ಮೋಸ ಅರ್ಥ ಆದೆ. ಹಾಂಗಾಗಿ ಇಬ್ಬರೂ ಸೇರಿ ಅವಂಗೆ ಒಂದು ವರ ಕೊಟ್ಟವೆ. ನೀ ಆಳಕ್ಕಿ ಆಗಿ ಹಾರಿ ಹೋಗು. ನಿಂಗೆ ಬೇಕಾದಲ್ಲಿಗೆ ಹೋಗಿ ಬರುವಾಂಗೆ ಖುಷಿಯಾಗಿರ್‌ಂತ ಹೇಳ್ವೆ, ಹೀಂಗಾಗಿ ಆ ತಮ್ಮ ಆಳಕ್ಕಿ ಆದೆ. ಈಗಲೂ ಒಮ್ಮೊಮ್ಮೆ ಕಾಡ್‌ಂದ ಅಣ್ಣಾಂತ ಕರೇದ್ ಕೇಳ್ಟೆ. ಕೆಲವೊಮ್ಮೆ ಅದ್ರ ಬೇಟೆ ಆಡಿ ನೋಡಿರೆ ಅದ್‌ರ ರೆಂಕೆ ಬುಡ್ಸಿರೆ, ಒಂದ್ ಕಾಲ್‌ಲಿ ಮೆಟ್ಟಿ ನೇಚಿರೆ ಒಂದಾಳ್ ಇದ್ದದೆ. ಮೊಯಿಂಸನಷ್ಟೆ ಎತ್ತರ ಇರುವ ಈ ಹಕ್ಕಿ ಈಗ ಕೂಡ ಕಾಡ್‌ಂದ ಮರ್ದುದರ ನೀವ್ ಕೇಳಿರುವರಿ.

* * * * *



# ಮೂಡು-ಬಾಳೆ ಒಟ್ಟಿಗೆ ಗೈಪ್ ಮಾಡ್ಬೇಡಿ

ಒಂದು ಊರ್‌ಲಿ ಒಂದು ಕುಟುಂಬ ಇತ್ತ್. ಆ ಕುಟುಂಬಲಿ ಗಂಡ್-ಹೆಣ್ಣ್, ಅವ್ಕೆ ಇಬ್ಬರು ಮಕ್ಕ. ಅದರ್ಲಿ ಒಂದು ಗಂಡ್, ಇನ್ನೊಂದು ಹೆಣ್ಣ್. ಮಕ್ಕಳ ಕೊಂಡಾಟಲಿ ಸಾಂಕಿದ ಅಯ್ಯೆ-ಅಪ್ಪಂಗೆ ಮಕ್ಕಳಿಗೆ ಪ್ರಾಯ ಬಂದದೇ ಗೊತ್ತಾತ್ಲೆ. ಮಂಜನೂ, ಮಗಳೂ ದೊಡ್ಡದಾದ ಮೇಲೆ, ಅಯ್ಯೆ-ಅಪ್ಪನ ಜವಾಬ್ದಾರಿನೂ ನಿರ್ವಹಿಸಕಲ್ಲ? ಹಾಂಗಾಗಿ ಮಗಳು ಪ್ರಾಯಕೆ ಬಂದ ಮೇಲೆ ಒಳ್ಳೆ ಒಬ್ಬ ಹೈದನ ನೋಡಿ ಮದುವೆ ಮಾಡಿ ಕೊಟ್ಟೊ. ಅಣ್ಣ-ತಂಗೆನೂ ಬಾರೀ ಪ್ರೀತಿಲಿ ಒಟ್ಟಿಗೆ ಬೆಳೆದಿದ್ದೊ. ತಂಗೆನೆ ಮದುವೆ ಮಾಡಿ ಕೊಟ್ಟ ಮೇಲೆ ಮನೇಲಿ ಮೂರೇ ಜನ. ಅಮ್ಮ-ಅಪ್ಪ ಮಂಜ ಹೀಂಗೆ.

ತಂಗೆನ ಮದುವೆ ಆದ ಮೇಲೆ ಹಂಞ ಸಮಯ ಆಗಿ ಅದ್ ಬಸುರಿ ಆತ್. ಆದ್ರೆ ಈಗನಾಂಗೆ ಆಗಾಗ ಹೋಗಿ ತಂಗೆನ ನೋಡಿ ಬಾಕೆ ಆಗ ಆತಿತ್ಲೆ. ಯಾಕೆಂತೇಳಿರೆ ಆಗ ವಾಹನದ ವ್ಯವಸ್ಥೆ ಇತ್ತ್‌ಲೆ. ಸರಿಯಾದ ರೋಡ್ ವ್ಯವಸ್ಥೆನೂ ಇತ್ಲೆ. ಹಾಂಗಾಗಿ ಕಾಲ್‌ನಡಿಗೆಲೇ ಹೋಕಾತ್ತಿತ್ತ್. ಮಗಳಿಗೆ 6 ತಿಂಗ ಕಳ್ದ್ 7 ತಿಂಗ ಹಿಡ್ಯಾಕಾತ್. ನಮ್ಮಲ್ಲಿ ಹಿಂದೆಂದಲೂ ನಡ್ದ್ ಬಂದ ಸಂಪ್ರದಾಯಂತೇಳಿರೆ, ಕೊಟ್ಟ

ಹೆಣ್ಣ್‌ನ ಶುರುನ ಹೆರಿಗೆಗಾಕನ ತವರಿಗೆ ಕರ್ಕಂಡ್ ಬಂದ್ ಬಯಕೆ ಕೊಡೊಕು. ಹಾಂಗೆ ಈ ಅಯ್ಯೆ-ಅಪ್ಪನೂ ಗೇನ ಮಾಡಿ ಮಂಜನೊಟ್ಟಿಗೆ ಹೇಳ್ದೊ. ನೋಡು ಮಂಜ ನಿನ್ನ ತಂಗೆಗೆ ಈಗ ಏಳ್ ತಿಂಗ ಹಿಡ್ತ್ ಗಡ. ಹಾಂಗಾಗಿ ನೀ ಒಮ್ಮೆ ಅವರ ಮನೆಗೆ ಹೋಗಿ, ನಮ್ಮ ಕ್ರಮಲಿ ಕರ್ಕಂಡ್ ಬಂದ್, ಅದ್ಕೆ ಬಯ್ಕೆ ಕೊಡುವ ಕ್ರಮ ಆಕು. ಮಂಜ ಇದ್ಕೆ ತಲೆ ಆಡ್ಸಿತ್. ಮನ್ಸ್‌ನೊಳಗೆ ಬಾರೀ ಖುಷಿ ಆತ್. ಮಾರ್ನೆ ದಿನ ನೆಲ ಬೊಳ್ಪಿಗೆ ಎದ್ದ್, ಕತ್ತಲೆನ ಒಳ್ಳೆ ಗಂಜಿಗೆ ಹಂಞ ಮೊಸರ್ ಹಾಕಿ ಉಪ್ಪು ಮತ್ತೆ ಮೆಣ್ಸ್ ಚಿರಿಂಬಿ ಹೊಟ್ಟೆ ತುಂಬಾ ಉಂಡತ್. ಒಟ್ಟಿಗೆ ಅರ್ಧ ಕಣ್ಣ ಚಾಯನೂ ಕುಡ್ತ್. ಗೋಡೆಲಿ ನೇತ್ ಹಾಕಿದ ಕುಡ್ತನ ಹಾಕಂತ್. ಸೊಂಟಕ್ಕೆ ಮುಕ್ಕಲ್ ತೋರ್ತುನ ಉಟ್ಟ್‌ಕಂಡ್ ಅಯ್ಯೆ-ಅಪ್ಪನೊಟ್ಟಿಗೆ ಹೇಳಿ ತಂಗೆ ಮನೆಗೆ ಹೊರ್ಟತ್. ಹೋರ್ಟಾಕನ ದೊಡ್ಡ ಬೆತ್ತದ ಕೊಡೆ ಹಿಡ್ಕಾಂಕೆ ಮರ್ತ್ತಿಲೆ. ಒಟ್ಟಿಗೆ ಖಾಕಿ ಚೀಲಲಿ ಒಳ್ಳ ಎಲೆ ಬಾಡ್ಸಿ, ಗಂಜಿನೂ ಕಟ್ಟಿಕಾಂತ್, ಯಾಕೆಂತೇಳ್ರೆ ನಡ್ಕಂಡ್ ಹೋಗಿ ಎತ್ತಿಕನ ಹೇಂಗೂ ಹಿಂಬೋತಾದೂಂತ ಅವಂಗೆ ಲಾಯ್ಕ್‌ಲಿ ಗೊತ್ತುಟು. ಹಾಂಗೆ ಎಲೆ ಅಡ್ಕೆ ಚೆಂಚಿನೂ ಸೊಂಟಕ್ಕೆ ಸಿಕ್ಕಿಸಿಕಾಂತ್. ಆ ಚೆಂಚಿಲಿ ನಾಲ್ಕೈದ್ ಇಡಿ ಅಡಿಕೆ, 2 ಕವುಳಿನಷ್ಟ್ ಎಲೆ ಹೊಸೋಪು ಹಾಂಗೆ ಒಂದು ಕೊಂಬುನ ಹಿಡಿನ ಚೂರಿ ಕೂಡಾ ಇತ್ತ್. ಬಿಸಿಲಾಕೆ ಮುಂದೆ ತಂಗೆನ ಮನೆಗೆ ಎತ್ತೋಕು. ನೆಂಟ್ರೊಟ್ಟಿಗೆ ಕೇಳಿ ಮತ್ತೆ ತಂಗೆನ ಕರ್ಕಂಡ್ ಬರೋಕುಂತ ತೀರ್ಮಾನ ಮಾಡಿಯೇ ಹೊರ್ಟತ್.

ಊರು ದೂರ ಇದ್ದದ್‌ರ್‌ಂದ ನಡ್ಕಂಡ್ ಹೋಗಿ ತಂಗೆ ಮನೆಗೆ ಎತ್ತಿಕಾಕನನೇ ಕತ್ತಲೆ ಕತ್ತಲೆ ಆತ್. ದನ ಕೂಡುವ ಹೊತ್ತಾತ್. ದೂರಂದ ಅಣ್ಣ ಬಾದು ತಂಗೆಗೆ ಕಂಡತ್. ಭಾರೀ ಖುಷಿಂದ ಕಂಚಿನ ಚೊಂಬುಲಿ ನೀರ್ ಹಿಡ್ದ್ ನಿತ್ತತ್. ಅಣ್ಣ ಬಂದಾಂಗೆ ನೀರ್ ಕೊಟ್ಟ್ ಒಳಗೆ ಕರ್ತ್. ಇಂವ ನೀರ್ ತಕ್ಕಂಡ್ ಹೊರಗೆ ಮೆಟ್ಟ್ ಕರೇಲಿ ಕೈ ಕಾಲ್ ತೋಳ್ದು ಒಳಗೆ ಜಗಲ್‌ಲಿ ಮಣ್ಣ್ ಚಿಂಟೇಲಿ ಕುದ್ದತ್. ತಂಗೆ ಅಣ್ಣಂಗೆ ಬಿಸಿ ಬಿಸಿ ಕಣ್ಣ ಚಾಯನೂ ಹಲ್ಸಿನ ಹಪ್ಪಳನೂ ತಂದ್ ಬೆಂಚಿ ಮೇಲೆ ಚಿಬುಳಿಲಿ ಇಸಿತ್. ಅಣ್ಣ ಒಂದೊಂದೆ ಹಪ್ಪಳನ ತಿಂದ್‌ಕಂಡ್ ತಂಗೆನ ಖುಷಿನ ನೋಡ್ತ್. ನನ್ನ ತಂಗೆ ಮುಂದೇನೆ ಪೊರ್ಲು. ಈಗ ಬಸುರಿ ಅದ್ರಂದ ಮೈ ಕೈ ತುಂಬಿಕಂಡ್ ಮೋರೆ ಎಲ್ಲಾ ಹೊಳ್ಪುಲಿ ಹೋಳಿತಾ ಉಟ್ಟು. ಅಷ್ಟೊತ್ತಿಗೆ ದನ ಕೂಡಿಕೆ ಹಟ್ಟಿ ಹಕ್ಕಲೆ ಹೋದ ಬಾವನೂ ಬಂದೊ. ಅತ್ತೆ-ಮಾವ-ಬಾವ-ತಂಗೆ ಹೀಂಗೆ ಸುಖ ಕಷ್ಟಗಳ ಮಾತಾಡಿಕಂಡ್

ಹೊತ್ತ್ ಹೋದೇ ಗೊತ್ತಾತ್ಲೆ. ಪೋಯಿ ಬಾವ ಮೀಯಕೆ ನಿರಡಿಗೆಂತ ಬಾವ ಕರ್ಕಂಡ್ ಹೋದೊ. ನೀರಡಿಲಿ ಮೊಣ್ಣ್‌ನ ಮಡ್ಕೆಲಿ ನೀರ್ ಲಾಯಿಕ್ ಕಾದ್ ಇತ್ತ್. ಬೆದ್ರ್ ಒಣ್ಕಲ್‌ಲಿ ಬೆಚ್ಚ-ಬೆಚ್ಚ ಲಾಯಿಕ್ ಕೈಗೆ ಕಾಲ್‌ಗೆ ತಲೆಗೆಂತ ನೀರ್ ಹೊಯಕಾಂತ್. ನಡ್ದ್ ಬಂದ ಇವಂಗೆ ಅದು ಬಾರೀ ಖುಷಿ ಆತ್. ನೀರ್ ಹೊಯ್ದದರ್ಲಿ ಮೈಯಿಂದೇ ಬಿಸಿ ಬಿಸಿ ಹೊಗೆ ಹೊರ್ಡಿಕೆ ಶುರ್ ಆತ್. ಇದರ ನೋಡ್ತಿದ್ದ ಬಾವ, ಇದೆಂತ ಬಾವ ಕೈ ಹಾಕಿಕಾದುಲೆ ನೀವುಇದರ ಹೇಂಗೆ ಮೀಯುದೂಂತ ಕೇಳ್ತ್. ನಂಗೆ ಅಭ್ಯಾಸ ಬಾವ. ಅದಲ್ಲದೆ ನಡ್ದ್ ಬಂದ್ ಬೊಚ್ಚಿಲ್‌ಗೆ ಹೀಂಗೆ ಮೀದರೆ ಕತ್ತಲೆಗೆ ಲಾಯಿಕ್ ನದ್ದೆ ಬಂದದೆಂತ ಮಾತಾಡಿಕ್‌ಂಡ ಇಬ್ಬರೂ ಮೀದು ಮನೆಗೆ ಬಂದೊ. ಗೋಡೆಲಿ ಹೊಡ್ದ ದೇವರ ಪಟಕ್ಕೆ ಕೈ ಮುಗ್ದ್ ಆತ್. ನೆಂಟಂಗೆ ಮನೆವು ಉಂಬಕ್ಕೆ ತಯಾರ್ ಮಾಡ್ದೊ. ನೆಂಟ ಬಂದ ಮೇಲೆ ಗೂಡುಲಿದ್ದ ಕೋಳಿನ ಕೊಂದ್, ಗೈಪ್ ಮಾಡಿ ತಂಗೆ ಒಳಗೆ ಬೇಗ ಬೇಗ ರಾಗಿ ರೊಟ್ಟಿನ ರೆಡಿ ಮಾಡಿಟು. ಎಲ್ಲವೂ ಒಟ್ಟಿಗೆ ಕುದ್ದ್ ಮಾತಾಡ್‌ಕೊಂಡೇ ಉಂಡೋ. ಅತ್ತೆ-ಮಾವ ನೋವು ಕೂಡಾ ಕತ್ತಲೆ ಮುಟ್ಟ ಗದ್ದೇಲಿ ಕೆಲ್ಸ ಮಾಡಿ ಬೊಚ್ಚಿಟು. ಹಾಂಗೆ ಎಲ್ಲವೂ ಬೇಗ ಬೇಗ ಮೊಂದ್ರಿ ಹಾಕಿ ಮಲ್ಗಿದೊ.

ಬೊಳಿ ಬುಡುವ ಹೊತ್ತಿಗೆ ತಂಗೆ ಎದ್ದ್ ಗಂಜಿ ಒಲೆ ಮೇಲೆ ಇಸಿಕೋತ್. ನಾವು ಎದ್ದ್ ನೀರಡಿಗೆ ಹೋಗಿ ಮೋರೆ ತೋಳ್ದ್ ಬಾಕನ ಕಣ್ಣ ಚಾ ಕೂಡಾ ರೆಡಿ ಆಗುಟು. ಇಂದ್ ತಂಗೆನ ಕರ್ಕಂಡ್ ಹೋದುಂತ ನಿನ್ನೆ ಕತ್ತಲೆಗೆನೇ ಮಾತಾಡ್ದ್‌ರ್‌ಂದ ತಂಗೆನೂ ತಲೆ ಎಲ್ಲಾ ಬಾಚಿ ರೆಡಿ ಆಗುಟು. ಬೇಗ ಎದ್ದ್ ಹಬ್ಬಂತಿಗೆ ಹೂನ ಕೂಡಾ ಬಾಳೆ ಮಡ್ಲ್‌ನ ಬೊಳ್ಳಿಲಿ ಒಂದು ಮಾಲೆ ಕಟ್ಟಿ, ತೊಳ್ಸಿ ದೈಲಿ ಇಸಿಟು. ಇದ್ದ ಮಲ್ಲಿಗೆ ಮೊಗ್ಗುನೂ ಅದರೊಟ್ಟಿಗೆ ಸೇರ್ಸಿಕೊಂಡುಟು. ತಲೆ ಬಾಚಿ, ಜಡೆ ನೈದಿಳಿಸಿ ಅದ್ಕೆ ಹೂ ಮಾಲೆ ಮುಡ್ತ್. ಕೈ ತುಂಬಾ ಹಸಿರ್ ಕುಪ್ಪಿ ಬಳೆ ಹಾಕಿಟು. ಹಣೆಗೆ ದೊಡ್ಡ ಕುಂಕುಮ ಬೊಟ್ಟು ಇಸಿ, ಹಸಿರು ಪಟ್ಟೆ ಸೀರೆನ ಉಟ್ಟುಟು. ಕಾಲ್‌ಲಿ ಖಡ್ಗ, ತಲೆಗೆ ಚಿನ್ನದ ಹೂ ಸೊಂಟಕ್ಕೆ ಡಾಬ ಕಟ್ಟಿದ ತಂಗೆನ ಅಣ್ಣ ಕಣ್ಣ್ ತುಂಬಿಕಾಂತ್. ದೃಷ್ಟಿ ತಾಂಗೂದು ಬೇಡಂತ ತಂಗೆಗೆ ಗೊತ್ತಿಲ್ಲದೆ ತಲೆಗೆ ನೆಟ್ಟಿ ತಕ್ಕೊಂಡ್‌ತ್. ಅತ್ತೆ ಮಾವನೊಟ್ಟಿಗೆ ಹೇಳಿ ಇಬ್ಬರೂ ತೌರ್ ಮನೆ ಕಡೆ ಹೊರ್‍ಟೊ.

ಬಾಕ್ಯಾಕನ ಹೇಂಗೆ ಬುತ್ತಿ ಕಟ್ಟಿಕಂಡನೊ ಹಾಂಗೆ ಈಗಲೂ ಬುತ್ತಿ ಕಟ್ಟಿಕಂಡ್ ನಿಧಾನಲಿ ಗದ್ದೆ ಪುಣಿಲಿ ಹೆಜ್ಜೆ ಹಾಕಂಡ್, ಚೋಡಿಗಳ ದಾಟಿಕಂಡ್, ಇಬ್ಬರೂ ಹೆಜ್ಜೆ ಹಾಕುತ್ತಾ ಒಳೊ. ಒಂದೆರಡು ಗಂಟೆ ನಡ್ದಾಕಾನ ತಂಗೆಗೆ ಬೊಚ್ಚೆಲ್ ಶುರು ಆತ್. ಮೈ-ಕೈ ತುಂಬಿದ ಹೆಣ್ಣ್, ಹೊಟ್ಟೇಲಿ ಕೂಸು, ಎರಡು ಜೀವದೊಟ್ಟಿಗೆ ನಡೆವ ತಂಗೆನ ಬೊಚ್ಚೆಲ್ ನೋಡಿ. ಹಂಞ ಹೊತ್ತ್ ಒಂದು ಮರದ ಕೆಳಗೆ ಇಬ್ಬರೂ ಕುದ್ದೊ. ಅಲ್ಲೇ ಹರಿತಿದ್ದ ಜೋಡಿಂದ ಇಬ್ಬರೂ ಹಂಞ ನೀರ್ ಕುಡ್ದ್ ಮತ್ತೆ ನಡೆಕೆ ಶುರು ಮಾಡ್ದೊ. ಎಷ್ಟಾದರೂ ಅಣ್ಣನೊಟ್ಟಿಗೆ ತಂಗೆಗೆ ಹೆಜ್ಜೆ ಹಾಕಿಕೆ ಕಷ್ಟ ಆತ್. ಹೋಗ್ತಾ-ಹೋಗ್ತಾ ಅಣ್ಣ ಮುಂದೆ ತಂಗೆ ಹಿಂದೇಂದ ನಡೀತಾ ಒಳೊ.

ಅಣ್ಣ, ಮುಂದೇನೆ ಹೇಳ್ದಾಂಗೆ ಬಾರೀ ಪೊರ್ಲುನ ಹೈದ. ಮೈ ಕೈಯಲ್ಲಿ ತುಂಬಿಕಂಡ್ ಇದ್ದಂವ. ಗದ್ದೇಲಿ ಕತ್ತಿ, ಕೊಟ್ಟುಂತ ಕೆಲ್ಸ ಮಾಡಿ ನಡೆಗೆಲ್ಲಾ ಬಾರೀ ಗಟ್ಟಿ ಇತ್ತ್. ಬೆಳ್ಳಂಗೆ ಬೆಳ್ಳಂಗೆ ಇದ್ದ ಅಣ್ಣನ ನೋಡಿಕನ ತಂಗೇನೂ ಬಾರೀ ಖುಷಿ ಆಗ್ತಿತ್. ಹೀಂಗೆ ನಡ್ಕಂಡ್ ಮುಂದೆ ಹೋಗ್ತಿದ್ದ ಅಣ್ಣನ ಕಾಲ್‌ನ ಮಿನ್‌ಚೆರೆ (ಮೀನ ಪೊಟ್ಟೆ) ಬೆಳ್ಳಂಗೆ ಆಗಿ ನೋಡಿಕನ ಯಾಕೋ ಈ ಬಸುರಿ ಹೆಂಗಸ್‌ಗೆ ತಿಂಬಕೆ ಆಸೆ ಆತ್. ಹೆಣ್ಣ್ ಮಕ್ಕ ಬಸುರಿ ಆಕಾಕನ ಅವ್ಕೆ ಏನೆಲ್ಲ ಆಶೆ ಇದ್ದದೆಂತ ಹೇಳಿಕಾದುಲೆ. ತವರ್ ಮನೆಗೆ ಬಂದ ಮೇಲೆ ಅಯ್ಯೆ ಮಗಳ ಕುದ್ದಿರ್ಸಿಕಂಡ್ ಮಗಳೊಟ್ಟಿಗೆ ಏನೆಲ್ಲಾ ಆಶೆ ಉಟ್ಟು ಅದರ ಮಾಡಿ ಕೊಡ್ದು ಪದ್ಧತಿ. ಹಾಂಗೆ ಮಗಳ ಮನೆಗೆ ಬಂದ ಮೇಲೆ ಕ್ರಮದಾಂಗೆ ಹೊದ್‌ರಿ-ಅವಲಕ್ಕಿ-ಕಾಯಾಲ್, ಬಾಳೆಹಣ್ಣು, ಅಕ್ಕಿ ಉಂಡೆ ಹೀಂಗೆ ಬೇಕಾದೆಲ್ಲಾ ಮಾಡಿ ಕೊಟ್ಟತ್. ಆದರೆ ಈ ಮಗಳಿಗೆ ದೊಡ್ಡ ಸಮಧಾನ ಇದ್ದಾಂಗೆ ಕಂಡತ್‌ಲೆ. ಅಯ್ಯ ಕೇಳ್ತ್ ಎನ್ ಮಂಜ ನಿಂಗೆ ಇನ್ನ್ ಎನಾರಾ ಆಸೆ ಉಟ್ಟಾಂತ. ಅದ್ಕೆ ಇಲ್ಲೆವ್ವಂತ ಹೇಳ್ತ್. ಆದ್ರು ಹೆತ್ತ ಅಯ್ಯಕಳಿಗೆ ಮಕ್ಕಳ ಮೋರೆ ನೋಡಿಕಾಕನೇ ಗೊತ್ತಾದೆ ಗಡ. ಯಾಕೇಂತೇಳ್ರೆ ಮಾತಾಡಿಕಾಗದ ಕೂಸುಗೆ ಎದೆ ಹಾಲ್ ಉಣ್ಸಿಕಾಕನ ಹೊಟ್ಟೆ ತುಂಬಿಟೋ ಇಲ್ಲೆನಾಂತ ಮೋರೆ ನೋಡಿ ತಿಳ್ಕಂಬ ಶಕ್ತಿ ಅಯ್ಯಕ್ಕಳಿಗೆ ದೇವ್ರು ಕೊಟ್ಟದೆ ಗಡ. ಹಾಂಗೆ ಈ ಅಯ್ಯೆಗೆ, ಏನೋ ನನ್ನ ಮಗಳಿಗೆ ಆಸೆ ಉಟ್ಟ್. ಅದ್ ಹೇಳ್ತುದ್ಲೆ, ಯಾಕೆಂತ ಚಿಂತೆ ಮಾಡಿಕೆ ಶುರು ಮಾಡ್ತ್. ಇದರ ಮಂಜನೊಟ್ಟಿಗೆನೂ ಹೇಳ್ತ್.

ಅಣ್ಣ ಕತ್ತಲೆಗೆ ತಂಗೆ ಒಬ್ಬಳೆ ಇರಿಕಾಕನ ಹೋಗಿ ಹಕ್ಕಲೆ ಕುದ್ದ್, ತಲೆ ಪೂಜಿಕಂಡ್ ಕೇಳ್ತ್. ಹೇಳ್ ತಂಗೆ ನಿಂಗೆ ಎಂತ ಆಸೆಂತ ನೀ ಎಂತ ಹೇಳಿರೂ ನಾ ತಂದ್ ಕೊಟ್ಟನೆಂತ. ತಂಗೆ ಏಕೋ ಕೇಳಿರೇ ಅಣ್ಣ ನನ್ನ ಕೊಲ್ಲುದುಂತ ಹೇಳ್ತಿಲೆ. ಆದರೆ ಅಣ್ಣ ಬುಡಕಲ್ಲಾ. ಸಣ್ಣದರ್ಲೇ ಒಟ್ಟಿಗೆ ಆಡಿಕಂಡ್ ಬೆಳ್ದೋವು. ಹೇಳ್ ತಂಗೆ ನಿಂಗೆ ಎಂತ ಆಸೆಂತ ಒತ್ತಾಯ ಮಾಡ್ತ್. ತಂಗೆ ಅಣ್ಣ ಇಷ್ಟ್ ಒತ್ತಾಯ ಮಾಡಿಕಾಕನ ಹೇಳದೆ ಹೇಂಗೆಂತ ಧೈರ್ಯ ಮಾಡಿ ಹೇಳ್ತ್. ಅಣ್ಣಾ ನೀ ನಂಗೆ ಏನ್ ಮಾಡಿಕೆ ಬೊತ್ತ್. ಆದರೆ ನಂಗೆ ಆಸೆ ಆದ್ ಇಲ್ಲಿವರೆಗೂ ಬೇರೆ ಯಾರಿಗೂ ಆಗಿರಿಕಿಲ್ಲೆ. ಅದ್‌ತೆಳಿರೆ ನೀ ಮೊನ್ನೆ ನಡ್ಕಂಡ್ ನನ್ನಂದ ಮುಂದೆ ಹೋಕನ ನಿನ್ನ ಕಾಲ್‌ನ ಮೀನ್‌ಚೆರೆ ಬೆಳ್ಳಂಗೆ ಕಂಡ ನಂಗೆ ಆಶೆ ಆತ್, ಅದರ ಒಂದು ತುಂಡು ತಿನೋಕೂಂತ ನನ್ನ ಬಯ್ಕೆಂತ ಹೇಳ್ತ್. ಅಣ್ಣಂಗೆ ತಲೆಗೆ ಮರ ಬಿದ್ದಾಂಗೆ ಆತ್. ಎಲಾ... ಇದರ ಆಸೆ ನನ್ನ ಮೀನ್‌ಚೆರೆನ ತುಂಡ್ ತಿಂಬೋದು. ಇದರ ಇಸಿಕೆ ಆಗದ್, ಇದು ನನ್ನ ಕೊಲ್ಲಿಕೆ ನೋಡ್ತಾ ಉಟ್ಟು, ಇದರ ನಾನೇ ಕೊಂದನೆ. ಏನಾದರಾಗಲಿಂತ ಅಳ್ಕೇಲಿ ಕೋಸಿ ಇಸಿದ ಕತ್ತಿ ತೆಗ್ತ್. ಇದರ ನೋಡ್ದ ತಂಗೆ ಹೆದರಿ ಓಡಿಕೆ ಶುರು ಮಾಡ್ತ್. ಒಟ್ಟಿಗೆ ಅಣ್ಣನೂ ಬೆರ್ಸಿತ್. ಓಡಿ–ಓಡಿ ಒಂದು ಹಳ್ಳದ ಕರೇಲಿ ಇದ್ದ ಸಂಪಿಗೆ ಮರಕ್ಕೆ ತಂಗೆ ಹತ್ತಿತ್. ಇದರ ನೋಡಿಕಂಡ್ ಇದ್ದ ಅಣ್ಣನೂ ಕತ್ತಿ ಹಿಡ್ಕಂಡ್ ಹತ್ತಿತ್. ತಂಗೆ ಮರದ ಕೊಡಿ ಕೊಡಿಗೆ ಹೋತ್. ಅಣ್ಣನೂ ಹಾಂಗೆ ಹೋತ್. ಇನ್ನೇನು ಮಾಡ್ದ ನನ್ನ ಅಣ್ಣ ಕೊಲ್ಲೊದು ಗ್ಯಾರಂಟಿಂತ ತಂಗೆಗಾತ್. ಇನ್ನ್ ಮರದ ಕೊಡಿಗೆ ಹೊಕ್ಕಾದುಲೆಂತ ತಂಗೆ ತೆಗ್ದ್ ಕೆಳಗೆ ಹರಿತಿದ್ದ ಹಳ್ಳಕ್ಕೆ ಹಾರ್ತ್. ಆ ಕಾಲ ಸತ್ಯದ ಕಾಲ ಆದರ್‌ಂದ ಹಾರ್ದ ಕೂಡ್ಲೇ ಅದು ಬಾಳೆ ಮೀನಾಗಿ ಹೋತ್. ಇದರ ನೋಡಿ ಕಂಡಿದ್ದ ಅಣ್ಣನೂ ಅದರೊಟ್ಟಿಗೆ ಹಾರ್ತ್. ಅಣ್ಣ ಹಾರಿಕಾಕನ ಮೂಡು ಮೀನಾತ್. ಆಗಲೇ ಅಣ್ಣ ಕರ್ದ್ ಹೇಳ್ತ್. ಸತ್ಯ ಕಾಲದ ಈ ಹೊತ್ತ್‌ಲಿ ನಾವು ಅಣ್ಣ–ತಂಗಿ ಬಾಳೆ–ಮೂಡು ಮೀನಾಗಿ ಹಳ್ಳಲಿ ಒಳೊ. ಯಾರೂ ಕೂಡಾ ಮೀನ್ ಹಿಡ್ದರೆ, ಬಾಳೆ–ಮೂಡುನ ಒಟ್ಟಿಗೆ ಗೈಪು ಮಾಡ್ಬೊಡಿಂತ ಶಾಪ ಕೊಟ್ಟಿತ್. ಬಹುಶಃ ಈ ಒಂದು ಕಾರಣಕ್ಕೆ ಈಗಲೂ ಬಾಳೆ–ಮೂಡು ಮೀನ್‌ನ ಒಟ್ಟಿಗೆ ಗೈಪ್ ಮಾಡ್ದುಲೆ.

* * * * *

## ಭವಾನಿಶಂಕರ ಅಡ್ತಲೆ



ಸುಳ್ಯ ತಾಲೂಕು, ಅರಂತೋಡು ಗ್ರಾಮದ, ಅಡ್ತಲೆ ಗೋರಸಿನಕೋಡಿ ದಿ। ಸುಬ್ಬಣ್ಣ ಗೌಡ, ಮತ್ತೆ ಶ್ರೀಮತಿ ದಿ। ಹೊನ್ನಮ್ಮ ಇವರ ದಾಂಪತ್ಯಲಿ ಹುಟ್ಟಿದ ಎರಡ್ ಗಂಡ್-ಮೂರು ಹೆಣ್ಣ್ ಮಕ್ಕಳ ಪೈಕಿ ಲಾಸ್ಟ್‌ನೊವು. ಓದಿದ ಸಣ್ಣ ಶಾಲೆ ಅಡ್ತಲೆ ಮತ್ತೆ ಅರಂತೋಡುಲಿ. ಹೈಸ್ಕೂಲ್, ಧರ್ಮಸ್ಥಳ ಶ್ರೀ ಮಂಜುನಾಥೇಶ್ವರ ಹೈಸ್ಕೂಲ್‌ಲಿ, ಪಿಯುಸಿ ಮತ್ತೆ ಪದವಿ, ನೆಹರೂ ಮೆಮೋರಿಯಲ್ ಕಾಲೇಜು ಸುಳ್ಯಲಿ. ಎಂ.ಎ. ಮಾನಸ ಗಂಗೋತ್ರಿ ಮೈಸೂರ್‌ಲ್ಲಿ, ಬಿ.ಎಡ್. ಪ್ರಸನ್ನ ಕಾಲೇಜು ಉಜಿರೆಲಿ. 1997 ಜನವರಿ 26ಕ್ಕೆ ಜಯಲತ ಕಾಶಿಬೆಟ್ಟು ಇವರೊಟ್ಟಿಗೆ ಮದುವೆ. 1999 ರ್‌ಂದ ಕೆ.ವಿ.ಜಿ ಶಿಕ್ಷಣ ಸಂಸ್ಥೆಲಿ ಉದ್ಯೋಗ. 10 ವರ್ಷ ಎ.ಒ.ಲ್.ಇ(ರಿ) ಇದರ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಯಾಗಿ ಕೆಲ್ಸ ಮಾಡ್ದೊವು. 2009 ರ್‌ಂದ ಕೆ.ವಿ.ಜಿ ಐ.ಟಿ.ಐ ಲಿ ಉದ್ಯೋಗಿಯಾಗಿ, ಕಳೆದ 17 ವರ್ಷಗಳಿಂದ ಬೇರೆಬೇರೆ ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಾಪನ ವೃತ್ತಿ ಮಾಡ್ತ ಒಳೊ. ಮೂಲತಃ ಕೃಷಿಕ ಕುಟುಂಬಂದ ಬಂದರೂ, ಕಾಲೇಜ್ ಜೀವನಲಿ ಇರಿಕಾಕನೇ ಕಥೆ ಕವನ, ಲೇಖನಗಳ ಬರ್ದ ದಾಖಲೆಗ ಇವರ್ದ್. ಇವರ ಕನ್ನಡದ ಸುರುನ ಕೃತಿ "ದೀಪಾವಳಿ ಮತ್ತು ಬಲಿಯೇಂದ್ರ" 2003ರ್‌ಲ್ಲಿ ಮಿತ್ರ ಬಳಗ ಕಾಯರ್ತೋಡಿ ಇವು ಪ್ರಕಟಿಸಿದ್. 2ನೇ ಕೃತಿ "ಶ್ರೀ ಮಲ್ಲಿಕಾರ್ಜುನ ಚಿತ್ರಕಥಾ ಮಾಲಿಕೆ" 2006 ಎಪ್ರಿಲ್ 13ಕ್ಕೆ ಶ್ರೀ ಮಲ್ಲಿಕಾರ್ಜುನ ದೇವಸ್ಥಾನದೊವು ಪ್ರಕಟಿಸಿದ್. ಇದ್ 3ನೇ ಕೃತಿ ಆಗಿ ಬರ್ತಾ ಉಟ್ಟು. ಅರೆಭಾಷೆಲಿ ಶುರುನ ಪುಸ್ತಕ. ಅರೆಭಾಷೆಲಿ ಶುರುದೊಂಳೂ ಪ್ರಕಟ ಆಗುವ "ಹಿಂಗಾರದ" ಹೆಚ್ಚಿನ ಪುಸ್ತಕಗಳ್ಲಿ ಇವರ ಲೇಖನಗ ಉಟ್ಟು. 'ಮನೆ ಚಿಂಟೇಲಿ"ಂತ ಶೀರ್ಷಿಕೆಲಿ 'ಶುದ್ಧಿವಾರ ಪತ್ರಿಕೆ'ಲಿ ಆಗಾಗ ಸಾಮಾಜಿಕ ಮತ್ತೆ ಹಿರಿಯರ ಬದುಕ್‌ನ ಕಥೆಗೆ ಪ್ರಕಟ ಆಗ್ತಾ ಇದ್ದದೆ.

ಡಾ। ಕೆ.ವಿ.ಜಿ.ಯವರ 75ನೇ ಹುಟ್ಟು ಹಬ್ಬದ ಲೆಕ್ಕಲಿ ಪ್ರಕಟ ಆದ ಬಾರಿ ದೊಡ್ಡ ನೆಂಪುನ ಪುಸ್ತಕಗ "ಅಮರಶ್ರೀ ಮತ್ತೆ ಅನನ್ಯ" ಇದರ ಸಂಪಾದಕ ಮಂಡಳಿ ಸದಸ್ಯ ಆಗಿ ಅಲ್ಲದೆ ಅನೇಕ ಸ್ಮರಣ ಸಂಚಿಕೆಗಳ ಉಪಸಂಪಾದಕರಾಗಿ, ಸಂಪಾದಕ ಮಂಡಳಿ ಸದಸ್ಯರಾಗಿ ಅಲ್ಲದೆ ತುಂಬಾ ಪುಸ್ತಕಗಳಿಗೆ ಬರಹಗಳ ಬರ್ದ್ ಕೊಟ್ಟ ದಾಖಲೆಗ ಇವರ್ದ್. ರಾಜಕೀಯವಾಗಿ, ಮಾಜಿ ಗ್ರಾಮ ಪಂಚಾಯತ್ ಸದಸ್ಯರ್, ತಾಲೂಕು ಮಟ್ಟದ ಒಂದು ಪಕ್ಷದ ಉಪಾಧ್ಯಕ್ಷರಾಗಿ ಕೆಲ್ಸ ಮಾಡ್ದೋವು. ಸಹಕಾರಿ ಸಂಘಲಿ ಕೂಡ ನಿರ್ದೇಶಕರಾಗಿ ಸೇವೆ. ಸಮಾಜಿಕವಾಗಿ, ಶ್ರೀ ಕ್ಷೇತ್ರ ಧರ್ಮಸ್ಥಳ ಜನ ಜಾಗೃತಿ ವೇದಿಕೆನ ನಿಕಟ ಪೂರ್ವ ಅಧ್ಯಕ್ಷರಾಗಿ, 2004ರ್‌ಂದ ಮದ್ಯವರ್ಜನ ಶಿಬಿರಗಳ ಮೂಲಕ ಸಾವಿರಾರ್ ಕುಟುಂಬಗಳ ಬದುಕು ಕಟ್ಟಿಕಾಂಕ್ಕೆ ಪೂರಕ ಕೆಲ್ಸ ಮಾಡ್ದೊವು. ದ.ಕ. ಗೌಡ ವಿದ್ಯಾ ಸಂಘಲಿ ಸತತ 3ನೇ ಬಾರಿ ನಿರ್ದೇಶಕರಾಗಿ, ಗೌಡ ಯುವ ಸಂಘಲಿ, ಅರಂತೋಡು ವಲಯದ ಉಸ್ತುವಾರಿ ನಿರ್ದೇಶಕರಾಗಿ, ವಿವಿಧ ಸಂಘ ಸಂಸ್ಥೆಗಳಲ್ಲಿ ತೊಡಗಿಸಿಕೊಂಡೊವು. ಧಾರ್ಮಿಕವಾಗಿ, ಶ್ರೀ ಮಲ್ಲಿಕಾರ್ಜುನ ದೇವಸ್ಥಾನ ತೊಡಿಕಾನದ ಆಡಳಿತ ಸಮಿತಿನ ಮಾಜಿ ನಿರ್ದೇಶಕರಾಗಿ, ಜೀರ್ಣೋದ್ಧಾರ ಸಮಿತಿನ ಸದಸ್ಯರಾಗಿ ಕೆಲ್ಸ ಮಾಡ್ದೋವು. ಯುವಕ ಮಂಡಲ, ರೋಟರಿ ಗ್ರಾಮಿಣದಳ ಹೀಂಗೆ ಉದ್ಯೋಗದೊಟ್ಟಿಗೆ ಬೇರೆ ಬೇರೆ ಸಂಘಸಂಸ್ಥೆಗಳಲ್ಲಿ ಕೆಲ್ಸ ಮಾಡಿ. ನಾಟಕ ಅಭಿನಯ, ಕಲೆ, ಸಾಹಿತ್ಯಂತ ಈಗೊಳು ಎಲ್ಲರೊಟ್ಟಿಗೆ ಬೆರ್ತ್ ಖುಷಿ ಪಡುವ ಜೀವನ ಇವರ್ದ್. ಹೆಣ್ಣ್ ಶ್ರೀಮತಿ ಜಯಲತ, ಇಬ್ಬರ್ ಮಕ್ಕ ನಿಶ್ಚಿತ್ ಅಡ್ತಲೆ ಸೆಕೆಂಡ್ ಬಿ.ಕಾಂ. ಮತ್ತೆ ದೀಕ್ಷಿತ್ ಅಡ್ತಲೆ, ಇಮೆಜಿನ್ ಟೆಕ್ನಲಾಜಿ (ಬಿ.ಎಸ್.ಸಿ.ಐ.ಟಿ.) ಮಂಗಳೂರು ಮಂಗಳ ಕಾಲೇಜಿಲಿ ಕಲಿತಾ ಉಟ್ಟು. ಸುಖೀ ಕುಟುಂಬ ಇವರ್ದ್.